# ಸಿದ್ಧಗಂಗಾ

ಂಪುಟ–28 ಸಂಚಿಕೆ–5 ಮೇ–1992



ಡ್ಡ ಬಳ್ಳಾಪುರದಲ್ಲಿ ನೆರವೇರಿದ (13-5-92) ಗ್ರಾಮಾಂತರ ಬಸವಜಯಂತಿ ಸಂದರ್ಭದಲ್ಲಿ
ರಶೈವ ಸಂಘದ ನೂತನ ಕಟ್ಟಡದ ಶಂಕುಸ್ಥಾಪನೆ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀಗಳ
ೂಂದಿಗೆ ಬಿ ಜೆ.ಪಿ. ಅಧ್ಯಕ್ಷ ಶ್ರೀ ಬಿ.ಎಸ್. ಯಡಿಯೂರಪ್ಪ, ರಾಜ್ಯಸಚಿವ ಶ್ರೀ ಟಿ.ಎನ್.
ಂಜುನಾಥ್, ಜನತಾದಳ ಅಧ್ಯಕ್ಷ ಜೆ.ಹೆಚ್. ಪಟೇಲ್, ಬೇಲಿಮಠದ ಶ್ರೀ ಶ್ರೀ ಶಿವರುದ್ರ
್ವಾಮಿಗಳು ಮತ್ತು ಶಾಸಕರಾದ ಶ್ರೀ ಆರ್.ಎಲ್. ಜಾಲಪ್ಪನವರು ಉಪಸ್ಥಿತರಿದ್ದಾರೆ.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ,
ಸಿದ್ಧಗಂಗಾ ಕ್ಷೇತ್ರ.

# ಅಭಿನಂದನೆ

ದಿನಾಂಕ 10-5-92 ರಂದು ನಡೆದ ಚುನಾವಣೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾದ ಶ್ರೀ ಗೊ.ರು. ಚನ್ನಬಸಪ್ಪನವರಿಗೆ **'ಸಿದ್ಧಗಂಗಾ'** ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ. ವಿನಮ್ರ ಸ್ವಭಾವದ, ಸರಳ ಜೀವಿಗಳಾದ, ಕಾರ್ಯಕ್ಷಮತ್ವಕ್ಕೆ ಇನ್ನೊಂದು ಹೆಸರಾದ ಸಂಘಟನಾ ಚತುರರಾದ ನಗೆಮುಖದ, ತೆಳುದೇಹಿ-ಗಳಾದ, ಶುಭ್ರ ಖಾದಿಧಾರಿ ಚನ್ನಬಸಪ್ಪನವರ ಸೇವಾವಧಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಜನಪರವಾದ ಕಾರ್ಯಕ್ರಮಗಳನ್ನು ಹಮ್ಮಿ ಕೊಳ್ಳುವುದರ ಮೂಲಕ ಸಾಹಿತ್ಯಾಭಿಮಾನಿಗಳೆಲ್ಲರ ಪ್ರೀತಿ ಗೌರವಗಳಿಗೆ ಪಾತ್ರವಾಗಲಿ ಎಂದು ಹಾರೈಸುತ್ತದೆ **'ಸಿದ್ಧಗಂಗಾ'**.

# ಸಿದ್ಧಗಂಗಾ

ಸಂಪುಟ - 28. ಸಂಚಿಕೆ - 5. ಮೇ - 1992.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಆಕಾಶದ ತಾರೆಗಳ ಎಣಿಸ ಬಲ್ಲವರುಂಟೆ
ಕಾಕು ಜನಗಳ ನುಡಿಗೆ ಮಿತಿಯುಂಟೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§§ §§ §§

ನಿಮ್ಮ ಚರಣವ ಮುಟ್ಟಿ ಭವಗೆಟ್ಟೆನೆಲೆ ತಂದೆ
ನಿಮ್ಮ ನುಡಿ ಕೇಳಿ ಬದುಕಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§§ §§ §§

ಪರಮ ಪುರುಷಾಕಾರ ಪರಮಾನಂದ ರೂಪ
ಪರಮಾತ್ಮ ಲಿಂಗವೆ ನನ್ನತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

ಹೆಚ್. ವಿ. ವೀರಭದ್ರಯ್ಯ.



# ಶ್ರೀವಾಣಿ

## ಅಪೂರ್ವ ರತ್ನ:

ದಯಾಮಯನಾದ ಭಗವಂತ ನಮಗೊಂದು ಅಪೂರ್ವರತ್ನವನ್ನು ಕೊಟ್ಟಿದ್ದಾನೆ. ಆ ರತ್ನದ ಬೆಲೆ ಕಟ್ಟಲಾಗದು. ಅದೊಂದು ಅಮೂಲ್ಯ ವಿಶೇಷ. ಅದರ ಬೆಲೆಯನ್ನು ತಿಳಿಯುವುದೇ ಮನುಷ್ಯಜನ್ಮದ ಉದ್ದೇಶ. ಅಂಥರತ್ನದಬೆಲೆ ತಿಳಿಯಲಾರದೆ ನಾವಿಂದು ವ್ಯರ್ಥ ಜೀವನ ನಡೆಸಿದ್ದೇವೆ. ಕಪಿಯ ಕೈಗೆ ಸಿಕ್ಕಿದ ರತ್ನದಂತಾಗಿದ್ದೇವೆ. ಕಪಿಗೆ ರತ್ನದ ಬೆಲೆ ತಿಳಿಯದು ತನ್ನಕೈಗೆ ಸಿಕ್ಕಿದ ರತ್ನವನ್ನು ಸುತ್ತಮುತ್ತ ತಿರುಗಿಸಿ ನೋಡುತ್ತದೆ. ನೆಕ್ಕಿ ನೋಡುತ್ತದೆ. ಮೂಸಿ ನೋಡುತ್ತದೆ. ಕೊನೆಗೆ ಕಚ್ಚಿ ನೋಡುತ್ತದೆ. ಇಷ್ಟಾಗಿಯೂ ರತ್ನದ ಬೆಲೆ ಅದಕ್ಕೆ ತಿಳಿಯದು. ಕೊನೆಗೊಮ್ಮೆ ದೂರಕ್ಕೆ ಎಸೆದು ಬಿಡುತ್ತದೆ. ರತ್ನದ ಸಾರ್ಥಕತೆಯಿರುವುದು ಅದರ ಬೆಲೆ ತಿಳಿದು ಗೌರವಿಸಿದಲ್ಲಿತಾನೆ? ಹಾಗಾದರೆ ಆ ಅಪೂರ್ವವಾದ ರತ್ನವಾದರೂ ಯಾವುದೆಂಬುದನ್ನು ಸ್ವಲ್ಪ ಆಲೋಚಿಸೋಣ. ಅದು ಬೇರಾವುದೂ ಅಲ್ಲ ಅಮೂಲ್ಯವಾದ ಮಾನವ ಜನ್ಮ. ಅಪೂರ್ವವಾದ ಅವಕಾಶಲಭ್ಯವಾದಾಗ ಅದರ ಪೂರ್ಣೋಪಯೋಗವನ್ನು ಮಾಡಿಕೊಳ್ಳಬೇಕು. "ಮಾನವ ಜನ್ಮ ದೊಡ್ಡದು ಅದ ಹಾನಿಮಾಡಲುಬೇಡಿ ಹುಚ್ಚಪ್ಪಗಳಿರಾ" ಎನ್ನುತ್ತಾರೆ ಪುರಂದರದಾಸರು. "ನರಜನ್ಮವತ್ಯಧಿಕ" ವೆಂದಿದ್ದಾರೆ ಶಿವಯೋಗಿಗಳು "ಮಾನವಜನ್ಮ ಹುಟ್ಟಿಬರುವುದೇ ದುರ್ಲಭ" ವೆನ್ನುತ್ತಾರೆ ಕಡಕೋಳದ ಮಡಿವಾಳಪ್ಪನವರು. ಸೃಷ್ಟಿಯಲ್ಲಿ ಅತ್ಯಂತ ಸುಂದರವಾದುದು ಮನುಷ್ಯಸೃಷ್ಟಿ ಎಂದಿದ್ದಾರೆ ಅನುಭಾವಿಗಳು. ಮಾನವನಾಗಿ ಹುಟ್ಟುವ ಮುನ್ನ "ಬಾರದ ಯೋನಿಗಳಲಿ ಬಂದೆ ಬಂದೆ" ಎಂಬ ಅಕ್ಕನವರ ಪ್ರಾರ್ಥನಾವಾಣಿ ಇಲ್ಲಿ ನೆನಪಾಗುತ್ತದೆ. ಕಲ್ಲಾಗಿ, ಮಣ್ಣಾಗಿ, ಗಿಡವಾಗಿ, ಮರವಾಗಿ, ಕ್ರಿಮಿಯಾಗಿ, ಕೀಟವಾಗಿ ಪಶುವಾಗಿ, ಪಕ್ಷಿಯಾಗಿ ಪ್ರಾಣಿಯಾಗಿ, ಜನ್ಮವೆತ್ತಿದ ನಂತರ ಕೊನೆಯದಾಗಿ ಮನುಷ್ಯರಾಗಿ ಹುಟ್ಟಿದ ಅನನ್ಯ ಪುಣ್ಯ ನಮ್ಮದಾಗಿದೆ. ಇಂಥಮನುಷ್ಯಜನ್ಮವೆಂಬ ರತ್ನ ನಮ್ಮದಾಗಿರುವಾಗ ಅರಿತು ಬಾಳಬೇಕು. ಪ್ರಪಂಚ ಧರ್ಮವನ್ನು ತಿರಸ್ಕರಿಸದಂತೆ ವ್ಯಕ್ತಿತ್ವದ ವಿಕಾಸದೊಂದಿಗೆ ಸಮಷ್ಟಿಯ ವಿಕಾಸಕ್ಕೂ ಸಹಕಾರಿಯಾಗಿ ಬಾಳುವ ಹಂಬಲ ನಮ್ಮದಾಗಬೇಕು. "ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ, ನಿನ್ನೊಡವೆ ಎಂಬುದು ಜ್ಞಾನರತ್ನ" ಎಂಬುದನ್ನು ತಿಳಿದುಜೀವಿಸಬೇಕು. ವ್ಯಕ್ತಿತನ್ನಲ್ಲಿ ಹುದುಗಿರುವ ವಾಕ್ ಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿಯನ್ನು ಸದುಪಯೋಗ ಮಾಡಿಕೊಂಡು "ಪರೋಪಕಾರಾರ್ಥ ಮಿದಂ ಶರೀರಂ" ಎಂದು ಬಾಳಿದಾಗ ಲಭ್ಯವಾದ ಅವಕಾಶವನ್ನು ಸಾರ್ಥಕ ಮಾಡಿ ಕೊಂಡಂತಾಗುತ್ತದೆ.

## ಶ್ರೀಮದುದ್ಧಾನೇಶ್ವರ ಶತಕಂ (ಮುಂದುವರೆದುದು)

– ಜಿ ವಿ. ರಾಜಶೇಖರಯ್ಯ.

ಕಳ್ಳಕಾಕರ ಕಾಯ್ವದೇವನೆ
ಒಳ್ಳೆಯವನೊಳಗಡಗಿ ಕೊಂಡಿಹ
ಕಳ್ಳ ಬೆಳ್ಳರ ನಡುವೆ ಭಾವನೇ ಪೀಠವಾಗಿರಲೂ ।
ಎಳ್ಳುಮೊನೆಮೇಲ್ಮುಳ್ಳು ಕೊನೆಯೊಳು
ಪೊಳ್ಳುದೊಗರೊಳಗಿರುವ ಮಾಯೆಯ
ಕಳ್ಳ ಹೊಳೆಯುವ ಜೀಯ ಉದ್ಧಾನೇಶದಯವಾಗೋ ॥

ಕೊಟ್ಟು ಹುಟ್ಟದೆ ಅನ್ಯರ್ಥಕೆ
ಕುಟ್ಟಕೊಂಡಳುತಿರುವೆ ಪೂರ್ವದಿ
ಕೊಟ್ಟುಕರೆಯದೆ ತಾನೆಬರುವಾಭಾಗ್ಯವಿರದಿರಲೂ ।
ಇಟ್ಟಧನವನು ಕದಿಯಲೊದೆವರು
ಕೊಟ್ಟಧನವೇಗಂಟು ನಿನ್ನಡಿ
ಗಿಟ್ಟಮನಧನಜೀಯ ಉದ್ಧಾನೇಶದಯವಾಗೋ ॥

ಮಿತ್ರರೆಲ್ಲರು ಕೂಡಿ ಕಾಶೀ
ಕ್ಷೇತ್ರಯಾತ್ರೆಗೆ ಹೊರಡು ತೊಡವೆಸು
ಸೂತ್ರವಾಗಿರಲಾಪ್ತನೆಡೆಯಿಡುವಂತೆ ಕೈವಲ್ಯ ।
ಯಾತ್ರಿಕರು ಸುಖದುಃಖದಾಪ್ತಿಪ
ಮಿತ್ರಗುರು ಪದಕ್ಕೊಪ್ಪಿಸಲು ಸುಖ
ಪಾತ್ರರಾಗದೆ ಜೀಯ ಉದಾನೇಶದಯವಾಗೋ ॥

ಲಿಂಗನೋಟದೆ ಲಿಂಗದಾಯುವು
ಜಂಗಮಾರ್ಚನೆ ಜಂಗಮಾಯುವು
ಪಿಂಗದಾಗುರುಕರುಣದಿಂದಾಗುರುವಿನಾಯುಷವೂ ।
ಭಂಗವಿರಹಿತರಪ್ಪಗುಳುಚರ
ಲಿಂಗಸಂಗಗೆ ವರಕ್ರಿಯಾಯುಷ
ಸಂಗವಪ್ಪೊಲು ಹರಸುತುದ್ಧಾನೇಶ ದಯವಾಗೋ

ಅಂಗಡಿಯೊಳಿರ ಕಾಣಕಣ್ಣಿಗೆ
ಭಂಗವಿರಹಿತ ಜನನಮರಣದಿ
ಲಿಂಗರೂಪನು ಹೆಣ್ಣು ಗಂಡುಕ್ಲೀಬತನವಿಲ್ಲಾ ।
ಸಂಗರಹಿತನು ಸಕಲರೊಳಗಿಹ
ಮಂಗಳಾಂಗನು ಲಿಂಗರೂಪಚಿ
ದಂಗ ಪರಶಿವ ಜೀಯ ಉದ್ಧಾನೇಶದಯವಾಗೋ॥

# ಶ್ರೀ ಸಿದ್ಧಲಿಂಗೇಶ್ವರ ವಚನ



ಎನ್ನ ಪ್ರಾಣದೊಳಗೆ ಹೂಳಿರ್ದ ಪರವು ಕಳೆಯ ತೆಗೆದು
ಶಿವಲಿಂಗಮೂರ್ತಿಯಮಾಡಿ ಎನ್ನ ಕರಸ್ಥಲಕ್ಕೆ ಕೊಟ್ಟನಯ್ಯಾ ಶ್ರೀಗುರು.
ಆ ಲಿಂಗವು ಸರ್ವಾವಸ್ಥೆಯಲ್ಲಿಯೂ ಅಂಗವಬಿಟ್ಟು ಅಗಲಲಾರದು ಎಂದು
ನಿರೂಪಿಸಿದನಯ್ಯಾ ಶ್ರೀಗುರು. ಇದು ಕಾರಣ, ಅಂಗವಬಿಟ್ಟು
ಲಿಂಗ ನಿಮಿಷಾರ್ಧವಗಲಿದಡೆ
ನಾಯಕನರಕತಪ್ಪದಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಪರಶಿವನೇ ಗುರುರೂಪದಿಂದ ಬಂದು ಶಿಷ್ಯನಿಗೆ ದೀಕ್ಷೆಮಾಡಿ ಅವನಕೈಯಲ್ಲಿ ಪೂಜಿಸಲು ಇಷ್ಟಲಿಂಗವನ್ನು ದಯಪಾಲಿಸುವನಷ್ಟೆ! ಶ್ರೀಗುರುವು ಶಿಷ್ಯನ ಕರಸ್ಥಲಕ್ಕೆ ಕರುಣಿಸಿಕೊಟ್ಟ ಇಷ್ಟಲಿಂಗವು ಕೇವಲ ಕಲ್ಲಿನ ಸ್ಥೂಲಗೋಲಕವಲ್ಲ. ಶಿಷ್ಯನ ಪ್ರಾಣಾಂತರ್ಗತವಾದ ಚಿತ್ಕಲೆಯನ್ನೇ ಗುರುವು ತನ್ನ ಏಕಾಗ್ರ ಚಿತ್ತದ ಅನಿಮಿಷ ದೃಷ್ಟಿಯ ಸಮ್ಮೋಹನ ಶಕ್ತಿಯಿಂದ ಶಿಷ್ಯನ ಮಸ್ತಕದ ಮೇಲೆ ತನ್ನ ವರದ ಹಸ್ತವನ್ನಿರಿಸಿ ಸೆಳೆದು ಮೂರ್ತಿಗೊಳಿಸಿ ಕರುಣಿಸಿದ ಶಿವಲಿಂಗವದು. ಅದು ಅಗಲುವುದೆಂದರೆ ಪ್ರಾಣಹೋದಂತೆ. ಇಷ್ಟಲಿಂಗವೆಂಬುದು ತನ್ನ ನಿಜಸ್ವರೂಪದ ಅರಿವಿನ ಕುರುಹು. ಅಂತೆಯೇ ಆತ್ಮಸ್ವರೂಪದ ಎಚ್ಚರವು ಎಂದೆಂದಿಗೂ ಅಭಾಧಿತವಾಗಿರಲು ತನ್ನ ವ್ಯೋಮನ ಭಾವ ಇವುಗಳಿಂದ ಎಷ್ಟೂ ಅಗಲದಂತೆ ಲಿಂಗವನ್ನು ಧರಿಸಿಕೊಳ್ಳಬೇಕಾಗುವುದು. ಇಷ್ಟಲಿಂಗದಲ್ಲಿ ಅನಿಮಿಷದೃಷ್ಟಿನಟ್ಟು ದೃಷ್ಟಿ ದೋಷವು ನಷ್ಟವಾಗುತ್ತಲೇ ಮೊದಲು ಕಷ್ಟಮಯವಾಗಿ ತೋರುತ್ತಿದ್ದ ಸೃಷ್ಟಿಯೆಲ್ಲವೂ ಶ್ರೇಷ್ಠ ನಂದನವನವಾಗಿ ಕಾಣಹತ್ತುವುದು. "ಸರ್ವಂ ಲಿಂಗಮಯಂ ಜಗತ್" ಎಂಬ ಅನುಭವವು ಮೂಡಿಬರುವುದು.

ಲಿಂಗವಂತನ ನಡೆನುಡಿಗಳೆಲ್ಲ ಲಿಂಗಮಯವೇ ಆಗುವವು. ಅಂಗಗುಣಗಳನ್ನೆಲ್ಲ ಹೋಗಲಾಡಿಸಿ ಲಿಂಗಗುಣಗಳನ್ನು ತನ್ನಲ್ಲಿ ತುಂಬಿಕೊಳ್ಳುವುದೇ ಲಿಂಗಪೂಜೆಯ ಮಹೋದ್ದೇಶ. ಅದನ್ನು ಸಾಧಿಸಲು ಲಿಂಗವನ್ನು ನಿರಂತರ ಅಂಗದ ಮೇಲೆ ಧರಿಸಬೇಕಾಗುವುದು. ಒಂದು ನಿಮಿಷವಾದರೂ ಲಿಂಗವು ಅಂಗವನ್ನು ಬಿಟ್ಟಗಲಿದರೆ ಪುನಃ ತಾಯಿಗರ್ಭವಾಸ ರೂಪವಾದ ನಾಯಕನರಕ ತಪ್ಪದು. ಜೀವನದ ಪರಮಾದರ್ಶನವನ್ನು ಸಾಧಿಸುವುದಕ್ಕೆ ಇಷ್ಟಲಿಂಗವು ಎಷ್ಟು ಶ್ರೇಷ್ಠ ಉಪಾಯವಾಗಿರುವುದೆಂಬುದನ್ನು ಇಲ್ಲಿ ಸ್ಪಷ್ಟವಾಗಿ ತಿಳಿದುಕೊಳ್ಳಬಹುದಾಗಿದೆ.

ಕೃಪೆ :– ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗೀಶ್ವರರು ನಿರೂಪಿಸಿದ ಷಟ್‌ಸ್ಥಲ ಜ್ಞಾನಸಾರಾಮೃತ,
ಪ್ರಕಾಶಕರು :- ಶ್ರೀ ತೋಂಟದ ಸಿದ್ಧಲಿಂಗೇಶ್ವರ ಸೇವಾಸಂಘ, ಎಡೆಯೂರು ಗದಗ.

## ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ - 572 104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪಾ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಎಂ. ರೇಣುಕಾರಾಧ್ಯ**
**ಪಿ. ಎನ್. ಚಂದ್ರಶೇಖರಯ್ಯ**
**ಬಿ. ವೀರಭದ್ರಯ್ಯ**

* * *

ಜಾಹೀರಾತು ವಿಭಾಗ
**ಸಿ. ಬಿ. ಶಂಕರಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾಕ್ಷೇತ್ರ

### ಚಂದಾ ವಿವರ
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 300-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ದಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ಅಖಿಲ ಭಾರತ ವೀರಶೈವ ಮಹಾಸಭೆ-21ನೇ ಅಧಿವೇಶನ

ವೀರಶೈವ ಸಿದ್ಧಾಂತ ಕರ್ನಾಟಕ ಭಾರತಕ್ಕೆ ಕೊಟ್ಟ ವಿಶಿಷ್ಟ ಕೊಡುಗೆ – ಹೀಗೆಂದವರು ಬಂಗಾಳದ ಘನವಿದ್ವಾಂಸರಾದ ಡಾ|| ಸುನೀತಕುಮಾರಚಟರ್ಜಿಯವರು ಕರ-ಉರ-ಶಿರಗಳ ಸಮನ್ವಯ ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ವಿಶಿಷ್ಟಧರ್ಮವಾದ ವೀರಶೈವ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಮುಖೇನ ಮಾನವೀಯತೆಯನ್ನು ಪ್ರತಿಪಾದಿಸಿದ ಹೆಗ್ಗಳಿಕೆಯನುಳ್ಳದ್ದು 'ಅನ್ಯರಿಗೆ ಅಸಹ್ಯಪಡ'ದಂತೆ ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬವಿನಯವಾಣಿಯನ್ನೇ ಮಹಾಮಂತ್ರವಾಗಿ ಪರಿಭಾವಿಸಿ ಅರಳಿದ್ದು ವೀರಶೈವ ಧರ್ಮ.

ವೀರಶೈವ ಧರ್ಮದ ಅನುಯಾಯಿಗಳ, ಸಮಾಜದ ಅಭಿವೃದ್ಧಿ ದೃಷ್ಟಿಯಿಂದ ಪರಮಪೂಜ್ಯ ಶ್ರೀ ಹಾನಗಲ್ ಕುಮಾರಸ್ವಾಮಿಗಳವರ ದೂರದೃಷ್ಟಿಯ ಫಲವಾಗಿ ರೂಪುತಾಳಿದ ಅಖಿಲಭಾರತ ವೀರಶೈವ ಮಹಾಸಭಾ ತನ್ನ 88ವರ್ಷಗಳ ದೀರ್ಘ ಇತಿಹಾಸದಲ್ಲಿ ಅನೇಕ ಸ್ಥಳಗಳಲ್ಲಿ ಮಹಾಸಭೆಗಳನ್ನು ನಡೆಸಿ ನಿರ್ಣಯಗಳನ್ನು ಕೈಗೊಂಡದ್ದು ಇದೀಗ ಚರಿತ್ರೆಯ ಪುಟಗಳಲ್ಲಿ ಕಾಣುವ ವಿಚಾರ. ಮಹಾಸಭೆಯ ಉದಯದ ದೆಸೆಯಿಂದಾಗಿ ಶಿಕ್ಷಣಸಂಸ್ಥೆ, ವೀರಶೈವ ಸಹಕಾರಿ ಬ್ಯಾಂಕುಗಳು ಪ್ರಾರಂಭವಾದವು. ಸಮಾಜದ ಜಾಗೃತಿಗೆ ಚಾಲನೆ ದೊರೆಯಿತು. ಕರ್ನಾಟಕ ದೊಡ್ಡ ಸಮಾಜವೆನಿಸಿದ ವೀರಶೈವಸಮಾಜ ತನ್ನ ಸಂಘಟನೆಯನ್ನು ಮಾಡುವಲ್ಲಿ ನಡೆದಿರುವ ಎಲ್ಲ ಪ್ರಯತ್ನಗಳೂ ಸ್ವಾಗತಾರ್ಹವೇ. ಆದರೂ ಸಂಘಟನೆಗೆ ಮಹಾ ತೊಡಕಾಗಿರುವ ಗುರು- ವಿರಕ್ತರ ಮೇಲಾಟ ಸಮಾಜದ ದುರ್ದೈವ. ರಾಷ್ಟ್ರನಾಯಕ ಹಿರಿಯರಾದ ಶ್ರೀ ನಿಜಲಿಂಗಪ್ಪನವರು ಕೈಮುಗಿದು ಕೇಳುವಷ್ಟು ಸಮಾಜ ಒಳಪಂಗಡಗಳ ಅರ್ಬುದ ರೋಗಕ್ಕೆ ಸಿಕ್ಕಿ ನರಳುತ್ತಿರುವುದು ಅಭಿಮಾನಿಗಳೆಲ್ಲರ ತೀವ್ರ ನೋವಿಗೆ ಕಾರಣ. ವಿಚಾರವಂತರು, ಸಂಶೋಧಕರು, ಮುತ್ಸದ್ಧಿಗಳು ಮೇಧಾವಿಗಳು, ವಿಜ್ಞಾನಿಗಳು, ಸಾಹಿತಿಗಳು ತಾಂತ್ರಿಕಜ್ಞರು, ನ್ಯಾಯವಾದಿಗಳು, ವೈದ್ಯರು ಪ್ರಾಧ್ಯಾಪಕರು, ವಿದ್ವಾಂಸರು, ಅನುಭಾವಿಗಳು ತುಂಬಿರುವ ವೀರಶೈವಸಮಾಜ ಒಗ್ಗೂಡುವಲ್ಲಿ ವಿಫಲವಾಗಿರುವುದೆಂದರೆ ಅಭಿಮಾನ ಶೂನ್ಯತೆಯೇ ಕಾರಣವಲ್ಲದೆಬೇರಲ್ಲ. ಬುದ್ಧಿಜೀವಿಗಳಂತೂ ದಂತಗೋಪುರದ ಸುಖವಾಸಿಗಳು. ಶ್ರಮ ಜೀವಿಗಳು ದೈನಂದಿನ ಬದುಕಿನ ಸಮಸ್ಯೆಯ ಸುಳಿಯಲ್ಲಿ ಸಿಕ್ಕಿ ನರಳುತ್ತಿರುವವರು. ರಾಜಕೀಯ ಧುರೀಣರಿಗೆ ಗದ್ದುಗೆಯ ಮೋಹ, ಜನನಾಯಕರಿಗೆ ಸ್ವಾರ್ಥದ ಗೀಳು, ಧರ್ಮ ಗುರುಗಳದಂತೂ ತಾವು ಶ್ರೇಷ್ಠ ಎಂಬ ಭಾವನೆ. ಸಮಾಜವನ್ನು ಯಾರು ಕೇಳಬೇಕು. ಅಲ್ಲದೆ ಸಮಾಜವೆಂಬುದೊಂದು ಅಮೂರ್ತ ಶಬ್ದ ತಾನೆ ಕಣ್ಣಿಗೆ ಕಾಣದ, ಕೈಗೆ ಎಟುಕದ ಪದ ಅದು. ಹೀಗಿರುವಾಗ ಅದರ ಬಗ್ಗೆ ಚಿಂತನೆಯಾರು ಮಾಡಬೇಕು.

ದಿನಾಂಕ 10-11-12 ರ ಮೇ ತಿಂಗಳಲ್ಲಿ ಬೆಳಗಾವಿ ನಗರದಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯಲ್ಲಿ ನಡೆದ ವಿದ್ಯಮಾನಗಳಂತೂ ಸಮಾಜದ ಅಭಿಮಾನಿಗಳಿಗೆ ನೋವನ್ನುಂಟು ಮಾಡಿರುವುದು ಸತ್ಯಕ್ಕೆ ದೂರವಾದುದಲ್ಲ. ನಾಡಿನ ಪತ್ರಿಕೆಗಳ ತುಂಬ ಬಿತ್ತರವಾದ ಸುದ್ದಿಯನ್ನೋದಿದ ವಿಚಾರವಂತ ಚಿಂತಿಸುವಂತಾಗಿದೆ. ಇಂದು ಮತ ಸ್ಥಾಪನೆಯನ್ನು ಕುರಿತು ಎದ್ದಿರುವ ವಿವಾದದಿಂದ ಆಗುವ ಪ್ರಯೋಜನವಾದರೂ ಏನು? ಸಹಸ್ರಾರು ವೀರಶೈವ ಯುವಕರು ನಿರುದ್ಯೋಗಿಗಳಾಗಿ ಬೀದಿ ಬೀದಿಗಳಲ್ಲಿ ತುತ್ತು ಅನ್ನಕ್ಕಾಗಿ ಅಲೆಯುತ್ತಿರುವಾಗ ವೀರಶೈವಮತವನ್ನು ಸ್ಥಾಪಿಸಿದ ಮಹಾನುಭಾವರನ್ನು ಕುರಿತು ಚರ್ಚೆಯಾಗಬೇಕೆ? "ಅನ್ನಕೊಡು, ಬಟ್ಟೆಕೊಡು, ಕಟ್ಟಿಕೊಡು ಮನೆಗಳನು"-ಎಂಬ ಕವಿವಾಣಿ ಮಹಾಸಭೆಗೆ ಮೊದಲು ಗಮನಕ್ಕೆ ಬರಬೇಕು. ಹೀಗೆಂದ ಮಾತ್ರಕ್ಕೆ ಮಹಾಸಭೆ ಏನು ಕ್ರಿಯಾತ್ಮಕ ಕಾರ್ಯಗಳನ್ನು ಮಾಡಿದೆ ಇಲ್ಲವೆಂದು ಇದರರ್ಥವಲ್ಲ. ಅನೇಕ ಒಳ್ಳೆಯ ಕೆಲಸಗಳನ್ನು ಮಾಡಿಕೊಂಡು ಬಂದಿದೆ. ಅದಕ್ಕಾಗಿ ಮಹಾಸಭೆಗೆ ಕೃತಜ್ಞತೆಯ ಶರಣಾರ್ಥಿಗಳೂ ಸಲ್ಲಬೇಕು. ಹಾಗೆಯೇ 21ನೆಯ ಮಹಾಸಭೆಯಲ್ಲಿ ಕೈಗೊಂಡ ನಿರ್ಣಯ-"ವೀರಶೈವ ಧರ್ಮಸ್ಥಾಪಕರು ಯಾರು ಎಂಬ ವಿವಾದದ ಬಗೆಗೆ ನಮ್ಮ ಶಕ್ತಿ ಹಾಗೂ ಸಮಯವನ್ನು ವ್ಯಯಮಾಡದೆ ಸಮಸ್ತ ವೀರಶೈವರ ಒಳಿತಿನ ಬಗೆಗೆ ಮಠಾಧೀಶರೂ ಗಣ್ಯರು ಮುಖಂಡರೂ ಚಿಂತನಶೀಲರಾಗಬೇಕು ಎಂಬುದು ಸಮುಚಿತವಾಗಿದೆ. ಬರೀ ಚಿಂತನ ಶೀಲರಾದರೆ ಸಾಲದು ಕ್ರಿಯಾಶೀಲರಾಗಬೇಕು, ಕಾರ್ಯೋನ್ಮುಖರಾಗಬೇಕು ಎಲ್ಲರೂ. 'ವಚನ ಸಾಹಿತ್ಯ'ವನ್ನು ವಿಶ್ವದ ಪ್ರಮುಖ ಭಾಷೆಗಳಲ್ಲಿ ಅನುವಾದಿಸಬೇಕು, ಬಸವ ಪ್ರಶಸ್ತಿ ಸ್ಥಾಪಿಸಲು ಕರ್ನಾಟಕ ಸರ್ಕಾರ ಮುಂದಾಗಬೇಕು, ವೀರಶೈವ ಧರ್ಮ, ಸಂಸ್ಕೃತಿಗಳನ್ನ ನಯವಾದ ನಾಗರೀಕ ರೀತಿಯಲ್ಲಿ ಅಗೌರವಿಸುವ ಯಾವುದೇ ಪ್ರಯತ್ನವನ್ನು ಉಗ್ರವಾಗಿ ಪ್ರತಿಭಟಿಸಬೇಕು, ಧಾರವಾಡದ ಕೃಷಿ ವಿಶ್ವವಿದ್ಯಾಲಯಕ್ಕೆ ಬಸವೇಶ್ವರ ಹೆಸರಿಡಬೇಕು ವೀರಶೈವ ಧರ್ಮಕ್ಷೇತ್ರಗಳನ್ನು ಅಭಿವೃದ್ಧಿ ಪಡಿಸಬೇಕು ಮುಂತಾದ 34 ನಿರ್ಣಯಗಳ ಸ್ವೀಕರಿಸಿದ್ದು ಶ್ಲಾಘನೀಯ. ಎಲ್ಲಕ್ಕೂ ಮೂಲವಾಗಿ ಮಹಾಸಭೆಯ ಆರ್ಥಿಕ ಸ್ಥಿತಿಯನ್ನ ಮನಗಂಡು ಮುಕ್ತಮನಸ್ಸಿನಿಂದ ನಿಧಿಯನ್ನು ಸಂಗ್ರಹಿಸಿದ್ದಂತೂ ಸ್ವಾಗತಾರ್ಹವಾದುದು 21ನೆಯ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿ ಗೌರವಿತರಾದ ಗುಲ್ಬರ್ಗದ ಮಹಾದಾಸೋಹಿ ಪೂಜ್ಯ ಶ್ರೀ ಶರಣಬಸಪ್ಪ ಅಪ್ಪ ಅವರ ಮಾರ್ಗದರ್ಶನದಲ್ಲಿ ಮುಂದಿನ ದಿನಗಳಲ್ಲಿ ಮಹಾಸಭೆ ಹೆಜ್ಜೆ ಇಡಬೇಕಾಗಿದೆ. ಸಮಾಜಕ್ಕೆ ಹೊಸದೊಂದು ದಿಕ್ಕು, ದಿಗಂತಮೂಡಿ ಬರಬೇಕಾಗಿದೆ. ವೀರಶೈವ ಅಥವಾ ಲಿಂಗಾಯಿತ ಧರ್ಮ ಜಗತ್ತಿಗೇ ಬೆಳಕುನೀಡುವಂಥ ಸತ್ವಸಂದೇಶವನ್ನೊಳಗೊಂಡ ಧರ್ಮಎಂಬುದನ್ನು ಸಮಾಜದ ಎಲ್ಲರೂ ತಮ್ಮ ಪರಂಪರೆಯ ಮಹಾಚೇತನಗಳನ್ನು ಸ್ಮರಿಸಿಬಾಳುವ ಮನಸ್ಸು ಮಾಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

# ಪಕ್ವವಾಯಿತು ಹನ್ನೆರಡು ವರುಷಕೆ ಬಸವಣ್ಣ ಹಣ್ಣು.

ವಿದ್ವಾನ್ ಎಂ. ಮಾಧವಪ್ಪ, ಎಂ.ಎ. ಸಾಹಿತ್ಯರತ್ನ ನಿವೃತ್ತ ಪ್ರಾಂಶುಪಾಲರು, "ಶ್ರೀನಿವಾಸ"
೧ನೇ ಹಂತ, ವಿನೋಬನಗರ, (ಡಿ. ವಿ. ಎಸ್. ಪ್ರೌಢಶಾಲೆ ಬಳಿ.) ಶಿವಮೊಗ್ಗ-577 201.

> " ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು ನಿಷ್ಪತ್ತಿಯೆಂಬ ಹಣ್ಣಾಯಿತು. ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ "

ಭಕ್ತಿಯ ನೆಲೆಯ ಮೇಲೆಯೇ ಬೆಳೆದ ಫಲ ಪರಿಪೂರ್ಣ ಹಣ್ಣಾಗಿ ಕಳಚಿಬೀಳ ಬೇಕೆನ್ನುವಷ್ಟರಲ್ಲಿ ಶಿವನೆತ್ತಿಕೊಳ್ಳುವ ಆಹಣ್ಣು ಭಕ್ತಿಯ ಪರಾಕಾಷ್ಠೆಯನ್ನು ತಲುಪಿದ ಮಹಾನುಭಾವರಲ್ಲದೆ ಅನ್ಯರಲ್ಲ. ಅಂತಹವರಲ್ಲೊಬ್ಬರು ಬಸವಣ್ಣನವರು. "ಪರಲೋಕ ದೂರನಾದ ತನ್ನನ್ನು ಹತ್ತಿರಕ್ಕೆ ಸೆಳೆದುಕೊ" ಎಂದು ಕೂಡಲ ಸಂಗಮನಾಥನಲ್ಲಿ ಸದಾ ಸರ್ವದಾ ಮೊರೆಯಿಟ್ಟು ಪೂಜಿಸುತ್ತಿದ್ದ ಅವರನ್ನು ಭಕ್ತಿಯು ತನ್ನವನನ್ನಾಗಿಸಿತು. ಏನ ಮಾಡುವೆ ಎನ್ನ ಪುಣ್ಯದ ಫಲವು ! ಶಾಂತಿಯ ಮಾಡಹೋದರೆ ಬೇತಾಳವಾಯಿತ್ತು! ಕೂಡಲ ಸಂಗಮದೇವನ ಪೂಜಿಸಿಹೆನೆಂದರೆ ಭಕ್ತಿಯೆಂಬ ಮೃಗ ಬೆನ್ನಟ್ಟಿ ಬಂದು ನುಂಗಿತಯ್ಯಾ. ಎಂದು ಭಕ್ತಿಯಲ್ಲಿ ಲೀನರಾಗಿ ಸಂಗಮೇಶ್ವರನು ಅವರನ್ನು ತನಗೆ ಬೇಕೆಂದೆತ್ತಿ ಕೊಳ್ಳುವಂತೆ ಮಾಡುವಂತಹ ಸಾಧನೆ ಗೈದವರವರು. ಆದರೆ ಭಕ್ತಿಯ ನೆಲೆಯಲ್ಲಿ ಪರಿಪೂರ್ಣತೆಯನ್ನು ಪಡೆಯಲು ಅವರು ದೀರ್ಘಕಾಲ ಸಾಧನೆ ಮಾಡ ಬೇಕಾಯಿತು. ಕಾರಣ ಅದು ಪಕ್ವವಾಗಬೇಕಲ್ಲವೆ? ಪಕ್ವಕ್ಕಲ್ಲದೆ ಪರಿಣಾಮ ಕಾಣದುಎಂದು ತಿಳಿಯ ಪಡಿಸಿದ್ದಾರಲ್ಲವೆ. ದಾಸಿಮಯ್ಯನವರು ಗಿಡದಲ್ಲಿ ಹೂಬಿಟ್ಟ ತಕ್ಷಣ ಫಲ ಪಕ್ವವಾಗದು. ಹೂಬಿಟ್ಟು ಹೀಚುದೋರಿ ಕಾಯಾಗಿ ಬಲಿತು ಪಕ್ವವಾಗಲು ಕಾಲ ತೆಗೆದು ಕೊಳ್ಳುತ್ತದೆ. ಮಾಗುವವರೆಗೆ ಹೂಬಿಟ್ಟ ಗಿಡಕ್ಕೆ ಸರಿಯಾದ ಆರೈಕೆ ಇದ್ದಲ್ಲಿ ಮಾತ್ರ ಅದು ಬಿಟ್ಟಿರುವ ಹೂವಿನಲ್ಲಿ ಪುಷ್ಟವಾದ ಕಾಯಿ ಬೆಳೆದೀತು. ಉತ್ತಮವಾದ ಪೋಷಣೆ ದೊರಕಿದರೆ ಮಾತ್ರ ಕಾಯಿ ಹಣ್ಣಾದೀತು. ಇಲ್ಲದಿದ್ದರೆ ರಸಹೀನವಾಗಿ ಬಾಡಿಹೋಗಿ ಉದುರಿಬಿದ್ದೀತು. ಈ ನಡುವೆ ಹುಳು ಹುಪ್ಪಡಿಗಳು ಹಿಡಿಯದೆ, ಗಾಳಿಯ ಹೊಡೆತಕ್ಕೆ ಉದುರದೆ ಗಟ್ಟಿಯಾಗಿ ನಿಲ್ಲುವಂತಾದಲ್ಲಿ ಮಾತ್ರ ಅದು ಬಲಿದೀತು. ಹೀಗೆ ಇರುವ ಬರುವ ರಸಹೀನತೆ, ಪೋಷಕತೆಯ ನ್ಯೂನತೆ, ಕೀಟಗಳ ಕೋಟಲೆಗಳನ್ನೆಲ್ಲ ಮೀರಿ ನಿಂತಾಗಲೇ ಅದು ಪಕ್ವವಾಗಿ ರುಚಿ ನೋಡಿತು ಕಂಡವರು ತಮಗೆ ಬೇಕೆಂದದನ್ನು ಎತ್ತಿಕೊಂಡಾರು. ಪಕ್ವವಾಗದಿದ್ದರೆ ಅದರತ್ತಯಾರೂ ಸುಳಿಯರು. ಹಣ್ಣು ಮಾತ್ರವಲ್ಲ ಯಾವುದೇ ವಿಷಯವಾಗಲಿ, ವಸ್ತುವಾಗಲಿ ಆದರ ಮಹತ್ತಿರುವುದು ಪಕ್ವತೆಯಲ್ಲಿ. ಬಿಟ್ಟಕಾಯಿ ಹಿಡಿದಕಾರ್ಯ

ಇವೆರಡರ ಪರಿಣಾಮವೇನೆಂದರಿಯ ಬೇಕಾದರೆ ಅದು ಪಕ್ವವಾಗಬೇಕು. ಪಕ್ವವಾಗಲು ಕಾಲಬೇಕು. ಅಲ್ಲಿಯವರಗೆ ತಾಳುತ್ತ ಬಲಿಯಬೇಕು. ಕಾಯಿ ಹಣ್ಣಾಗುವವರೆಗೆ ಗಿಡವಪಾಲನೆ ಪೋಷಣೆ ತೋಟಗಾರನದು. ಭಕ್ತಿಫಲ ಪಕ್ವವಾಗುವವರೆಗಿನ ಪಾಲನೆ ಪೋಷಣೆಯ ಹೊಣೆಗಾರಿಕೆ ಶಿವನದು. ಹಣ್ಣು ವಾಗಿದ ಮೇಲೆ ಅದಕ್ಕೆ ಅದನ್ನು ಪಾಲಿಸಿ ಪೋಷಿಸಿದ ಮಾಲಿಗಿಂತ ಅಧಿಕ ಮೌಲ್ಯವಿರುವಂತೆ ಭಕ್ತಿಫಲ ವಾಗಿದ ಮೇಲೆ ಅದನ್ನು ಪಾಲಿಸಿ ಪೋಷಿಸಿ ಬೆಳೆಸಿದ ಶಿವನಿಗಿಂತ ಭಕ್ತನಿಗೆ ಅಧಿಕ ಮನ್ನಣೆ. ಶಿವನಿಗಿಂತ ಶಿವಭಕ್ತ ಮೇಲಾಗುತ್ತಾನೆ. ಬಸವಣ್ಣನವರು ಸಹಾ "ಭಕ್ತನೆನಿಸುವೆನಯ್ಯಾ ಮೆಲ್ಲ ಮೆಲ್ಲನೆ, ಯುಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ, ಸಾರಿ ಶರಣನೆನಿಸುವೆನಯ್ಯಾ ಮೆಲ್ಲ ಮೆಲ್ಲನೆ; ಎಡಹು ಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯಾ ಕೂಡಲ ಸಂಗಮದೇವಾ, ನಿಮ್ಮಿಂದಧಿಕನೆನಿಸುವೆನಯ್ಯಾ ಎಂದು ಶಿವಭಕ್ತಿಯನ್ನು ಸಾಧಿಸಿ ಶಿವಯುಕ್ತರಾಗಿ ಶಿವನಿಂದಧಿಕನೆನಿಸಿಕೊಂಡ ಮಹಾನುಭಾವರು.

ಬಸವಣ್ಣನವರು ತಾವು ಇಚ್ಛಿಸಿದಲ್ಲಿ ಐಹಿಕದ ಸಕಲ ಸುಖ ಸೌಭಾಗ್ಯಗಳನ್ನು ಸಾಕು ಸಾಕೆನಿಸುವಷ್ಟುನ್ನು ಅನುಭವಿಸಬಹುದಾಗಿತ್ತು. ಅಂತಹ ಸ್ಥಾನಮಾನ, ಅಧಿಕಾರ ಗೌರವಾದಿ ಸಕಲ ಸೌಕರ್ಯವೂ ಸೌಭಾಗ್ಯವೂ ಅವರಿಗಿತ್ತು. ಆದರೆ "ಹಾವು ಹದ್ದು ಕಾಗೆ ಗೂಗೆ ಅನಂತಕಾಲ ಬದುಕವೆ? ಬೇಡವೋ ಮಾನವಾ, ಲೇಸೆನಿಸಿಕೊಂಡು ಬದುಕವೋ ಮಾನವಾ ಶಿವಭಕ್ತನಾಗಿ ಜೀವಿತಂ ಶಿವಭಕ್ತಾನಾಂ ವರಂ ಪಂಚದಿನಾನಿಚ ಅಜಕಲ್ಪ ಸಹಸ್ರೇಭ್ಯೋ ಭಕ್ತಿಹೀನಸ್ಯ ಶಂಕರಿ' ಎಂದುದಾಗಿ ನಮ್ಮ ಕೂಡಲ ಸಂಗಮದೇವರ ಭಕ್ತಿವಿಡಿದು ಐದುದಿನ ಬದುಕಿದರೆ ಸಾಲದೇ ಎಂದುಕೊಂಡು ಭಕ್ತಿದೀವಟಿಗೆಯನ್ನೆತ್ತಿ ಹಿಡಿದು ಶಿವಪಥವನ್ನು ತನ್ನದಾಗಿಸಿಕೊಂಡರು. ಭಕ್ತಿ ಪಂಜರದೊಳಗೆ ಬಂಧಿತರಾಗಿ ಶಿವನಾಮ ಧ್ಯಾನಿಸುತ್ತ ವರ್ಧಿಸಿದರು. ಭಕ್ತಿಯೆಂಬ ನಿಧಾನವ ಸಾಧಿಸುವರ ಶಿವಪ್ರೇಮಲೆಂಬಿಂಜನವ ನೆಚ್ಚಿಕೊಂಬುದು. ಭಕ್ತನಾದವಂಗೆ ಇದೇ ಪ್ರಥಮವಾಗಿರಬೇಕು ಅಲ್ಲವೆ. !

ಬಸವಣ್ಣನವರು ಸಂಸಾರದಲ್ಲಿದ್ದವರು. ಸಂಸಾರದಲ್ಲಿದ್ದಲ್ಲಿ ಕಾಮ, ಕ್ರೋಧ, ಲೋಭ, ಮೋಹಗಳಿಂದ ಕಟ್ಟುವಡೆದು, ಹಸಿವು ತೃಪ್ತಿ ವ್ಯಸನಗಳಿಗಾಗಿ ಕುದಿಧು ಬಳಲ ಬೇಕಾಗುತ್ತದೆ. ಅವು ಸದಾ ಬೆನ್ನಟ್ಟುತ್ತಿರುತ್ತವೆ. ಹಿಂಬಾಲಿಸಿ ಕೊಡವು ಬರುವುವೆಂದು ಸಂಸಾರವನ್ನು ತ್ಯಜಿಸಿ ಹೋಗುವುದಲ್ಲ. ಬೆನ್ನುದೋರಿಸಿ ಓಡುವುದರಲ್ಲಿ ಯಾವ ಪುರುಷಾರ್ಥವೂ ಸಾಧನೆ ಯಾಗುವುದಿಲ್ಲ. ಎದೆಸೆಟೆದು ನಿಲ್ಲುವುದರಲ್ಲೇ ಯಶಸ್ಸು ಲಭ್ಯವೆಂದು ಮನಗಂಡ, ಸಂಸಾರದಲ್ಲಿದ್ದುಕೊಂಡೆ ಅವುಗಳನ್ನು ಗೆದ್ದು ಮುನ್ನಡೆಯಬೇಕು ಭವಬಂಧನ "ಭವಪಾಶವಾದ ಕಾರಣವೇನು, ಹಿಂದಣ ಜನ್ಮದಲ್ಲಿ ಲಿಂಗವ ಮರೆತುದರಿಂದ, ಸಿರಿಯಲ್ಲಿ ಜಂಗಮವ ಮರೆತುದರಿಂದ ಸಂಸಾರವೆಂಬುದು

ಪಾಶವಾಗಿ ಪರಿಣಮಿಸಿತು. ಅದೇ ಲಿಂಗ ಜಂಗಮವನ್ನು ಮರೆಯದೆ ಇದ್ದಿದ್ದರೆ ಬಂಧನವಾಗುತ್ತಿರಲಿಲ್ಲ. ಆದ್ದರಿಂದ ಭವದಲ್ಲಿದ್ದುಕೊಂಡೇ ಸತಿ ಪತಿಯರೊಂದಾಗಿ ಭಕ್ತಿ ಸಾಧಿಸಿದರೆ ಯಾವ ದುಷ್ಟಶಕ್ತಿಯನ್ನಾದರೂ ಎದುರಿಸಬಹುದು. ಮಾತ್ರವಲ್ಲ, ಆದುಶಿವನಿಗೂ ಹಿತವಾಗುವುದೆಂದು ತಾವು ಆ ರೀತಿ ನಡೆದು ತೋರಿಸಿದರು.

ಸಂಸಾರದ ಜಂಜಡಗಳು ಅವರಿಗೆ ತಿಳಿದಿರಲಿಲ್ಲವೆಂದಲ್ಲ. ಅವರು ಸ್ವತಃ ಸಂಸಾರಿಗಳಾಗಿದ್ದರಲ್ಲದೆ! ಸಂಸಾರದಲ್ಲಿ ಬರುವ ಎಲ್ಲ ಕಷ್ಟ ಕಾರ್ಪಣ್ಯಗಳ, ದುಗುಡದುಮ್ಮಾನಗಳ ಭಿನ್ನ-ಭಿನ್ನ ಮನೋಭಾವಗಳ ಅನುಭವವೂ ಅವರಿಗಿತ್ತು. ಈ ಸಂಸಾರವೆಂಬುದು "ಇಲಿ ಗಡಹನೊಡ್ಡಿದಲ್ಲಿರ್ಪಂತೆ ಸಂಸಾರ ತನು ಕೆಡುವನ್ನಕ್ಕ ಮಾಣದು ಹೆರರ ಬಂಧಿಸುವುದು, ಹೆರರ ವಿದ್ರಿಸುವುದು ನಾನಾ ವರ್ಣದ ಈ ಸಂಸಾರ ಹಾವ ಹಾವಾಡಿಗನ ಸ್ನೇಹದಂತೆ. ಹಾವಿಗೂ ಹಾವಾಡಿಗನಿಗೂ ಸ್ನೇಹವಿರುವುದಾದರೂ ಒಂದಲ್ಲ ಒಂದು ದಿನ ಹಾವು ಕುಟುಕುವಂತಹದ್ದೇ. ಚಂದ್ರಮನಂತೆ ಕಳೆ ಸಮನಿಸಿದವನಿಗೆ ರಾಹುವಿನಂತದು ಸರ್ವಗ್ರಾಸ ಮಾಡಿ ನುಂಗುವುದು. ಇಂದಿಗೆಂತು, ನಾಳೆಗೆಂತು ಎಂದು ಬೆಂಡೊಡಲ ಹೊರೆಯನ್ನು ಹೊರೆಯುವುದರಲ್ಲಿಯೇ ಕಾಲ ಕಳೆಯುವಂತೆ ಮಾಡುವಂತಹದ್ದು. ಅದೊಂದು ಹಾವು, ಕಚ್ಚಿಬಿಟ್ಟಿತೆಂದರೆ ಪಂಚೇಂದ್ರಿಯಗಳ ಸುಖವೆಂಬ ವಿಷದಿಂದ ಮುಂದುಗೆಡುವಂತೆ ಮಾಡವಂತಹದ್ದು, ಜೊತೆಗದು ಕಾಲಲ್ಲಿ ಕಟ್ಟಿದ ಗುಂಡು, ಕೊರಳಲ್ಲಿ ಕಟ್ಟಿದ ಬೆಂಡು ತೇಲಲೀಯದು ಗುಂಡು, ಮುಳುಗಲೀಯದು ಬೆಂಡು ಇಂತಪ್ಪ ಸಂಸಾರಶರಧಿಯ ದಾಂಟಿಸಿ ಕಾಲಾಂತಕನೇ ಕಾಯೋ ಎಂಬು ಪ್ರಾರ್ಥಿಸುವಂತೆ ಮಾಡುವಂತೆ ಹದ್ದು.

ಇಂತಹ ಸಂಸಾರದ ದಂದುಗ ಹಿಂಗುವುದೆಂದು ? ಮನದಲ್ಲಿ ಪರಿಣಾಮವಹುದೆಂದು : ಪರಮಶಾಶ್ವತವಹುದೆಂದು ? ಮೊದಲೇಕಾಯವಿಕಾರ ಕಾಡುತ್ತಿದ್ದರೆ ಅದಕ್ಕೆ ಮನೋವಿಕಾರ ಬೇರೆ ಕೂಡಿಕೊಂಡು ಇಂದ್ರಿಯವಿಕಾರ ಸುಳಿಯುವಂತೆ ಮಾಡುವುದು ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎಷ್ಟು ಮಾಡಿದರೂ ಸಂಸಾರ ಸಂಗವು ಬಿಡದೆ ಮತ್ತೆ ಮತ್ತೆ ಅದನ್ನೇ ನೆಕ್ಕ ಬಯಸುವ ಮನಸ್ಸಿನ ನಾಯಿತನವನ್ನು ಮಾಣಿಸುವುದು. ಕಷ್ಟ. ತನ್ನ ವಿಚಾರಿಸಲೊಲ್ಲದು, ಇದಿರ ವಿಚಾರಿಸಹೋಗುವ ಮನಸ್ಸನ್ನು ಹಿಡಿತಕ್ಕಿಟ್ಟುಕೊಳ್ಳದ ಹೊರತು ಸಂಸಾರದ ದುಂದುಗ ಬಿಡದು. ಅದರೆ ಈ ಮನಸ್ಸೋ! ಲಿಂಗವ ಜಂಗಮನ ನೆಚ್ಚದೆ, ಕೂರ್ಪರ ಕಂಡರೆ ನೆಚ್ಚದೆ, ತನ್ನಿಚ್ಛೆಯ ನುಡಿದರೆ ನಚ್ಚುವುದು, ಇದಿರಿಚ್ಛೆಯ ನುಡಿದರೆ ಮೆಚ್ಚದು. ಅದನ್ನು ಎಷ್ಟೆಷ್ಟು ಶಿವಶಕ್ತಿಯಕಡೆಗೆ ಎಳೆಯಬೇಕೆಂದು ಪರಿಶ್ರಮಿಸಿದಷ್ಟೂ, ಅದು ಅಂದಣವನೇರಿದ ಸೊಣಗನಂತೆ ಮುನ್ನಿನ ಸ್ವಭಾವವನ್ನು ಬಿಡದೆ ಮತ್ತೆ ಮತ್ತೆ ತಿಪ್ಪೇರಾಶಿಯಲ್ಲೇ ಹೊರಳಲು ಅಂದಣದಿಂದ ಧುಮುಕುತ್ತಿರುತ್ತದೆ. ಮರವನ್ನೇರಿದ ಮರ್ಕಟನಂತೆ ಹಲವು ಕಂಬಿಗೆ ಹಾಯುತಲಿದೆ,

ಇದನ್ನು ನಂಬುವುದೆಂತು, ನೆಚ್ಚುವುದೆಂತು ? ಅದಕ್ಕಾಗಿ "ವಿಷಯವೆಂಬಪಸುರನ್ನಿ ಮುಂದೆ ತಂದು ಪಸರಿಸರದಿಯ್ಯಾ, ಹಸುವೇನ ಬಲ್ಲದು, ಹಸುರೆಂದೆಳೆಸುವುದು ವಿಷಯರಹಿತನ ಮಾಡಿ, ಭಕ್ತಿರಸವ ದಣಿಯೆ ಮೇಯಿಸಿ, ಸುಬುದ್ಧಿಯೆಂಬು ಕವನೆರೆದು ನೋಡಿ ಸಲಹಯ್ಯಾ" ಎಂದು ಅಂಗಲಾಚದೆ ಇರಲಾಗುವುದಿಲ್ಲ ಹೌದು; ಬಡಪಶು ಪಂಕದಲ್ಲಿ ಬಿದ್ದೊಡೆ ಕಾಲ ಬಡಿವುದಲ್ಲದೆ ಬೇರೆ ಗತಿಯುಂಟೆ ಅದನ್ನು ತುಡು ಗುಣಿಯೆಂದು ಹಿಡಿದು ಬಡಿಯುವಮುನ್ನ, ಅದರ ಒಡೆಯನನು ಬಯ್ಯುವ ಮುನ್ನ, ಅದನ್ನು ಅಲ್ಲಿಂದ ಪಾರುಗೊಳಿಸಬೇಕಾದದ್ದು ಅದರೊಡೆಯ ಕರ್ತವ್ಯವಲ್ಲವೇ ! ಕರುಣಾಕರ, ಅಭಯಾಕರಾ, ವರದಾನಿ ಕರುಣಿಸಯ್ಯಾ ಸಂಸಾರ ಬಂಧನವನ್ನು ಮಾಣಿಸೆನಗೆ ಕೃಪೆ ಮಾಡಿ ನಿಮ್ಮ ಶ್ರೀ ಪಾದಪದ್ಮದ ಭ್ರಮರನಾಗಿರಿಸು ಭಕ್ತಜನ ವಲ್ಲಭಾ" ಎಂದು ಸಂಸಾರ ಪಾಶದಿಂದ ಬಿಡುಗ ಹೊಂದಲು ಸದಾಶಿವನಲ್ಲಿ ಮೊರೆಯಿಟ್ಟು ಶಿವನೊಲುಮೆ ಗಳಿಸಬೇಕಾಗುತ್ತದೆ ಭಕ್ತಪ್ರಿಯನಾದ ಶಿವನನ್ನು ಭಕ್ತಿಯಿಂದ ತನ್ನೆಡೆಗೆ ಎಳೆದುಕೊಳ್ಳಬೇಕಾಗಿದೆ" ಒಂದ ಮೊಲಕ್ಕೆ ನಾಯನೊಂಭತ್ತು ಬಿಟ್ಟಂತೆ 'ಎನ್ನ ಬಿಡು, ತನ್ನ ಬಿಡೆಂಬುದು ಕಾಯವಿಕಾ ಎನ್ನ ಬಿಡು, ತನ್ನ ಬಿಡೆಂಬುದ ಮನೋವಿಕಾರ. ಕರ್ಣೇಂದ್ರಿಯಗಳೆಂಬ ಸೊಣ ಮುಟ್ಟದ ಮುನ್ನ ಮನ ಶಿವನನ್ನೆಯ್ದುವುದು ಮುಖ್ಯ.

ಆದರೆ ಆದು ಸುಲಭ ಸಾಧ್ಯವಾಗುವುದಲ್ಲ ಅಥವಾ ಒಂದೆರಡು ದಿನಗಳಲ್ಲೊ ತಿಂಗಳಲ್ಲೋ, ವರುಷಗಳಲ್ಲೋ ವಶ್ಯವಾಗುವುದಲ್ಲ. ಶಿವನನ್ನು ಒಲಿಸುವುದೆಂದರೆ ಆತನನ್ನು ಕಾಣುವುದೆಂದರೆ ಅದು ಅಂಗೈ ನೆಲ್ಲಿಕಾಯಿಯೆ? ಆತನನ್ನು ಒಲಿಸಿಕೊಳ್ಳ ದೆಂದರೆ ಅದು ಸುಲಭದ ಮಾತೇ! ದೇವನೇನು ಸುಲಭವಶ್ಯನೆ! "ಶರಣೆಂದು ಪಾದ ಹಿಡಿದಿಹೆನೆಂದರೆ ಚರಣದ ನಿಲವು ಕಾಣಬಾರದು, ಕುರುಹುಹಿಡಿದಿಹೆನೆಂದರೆ ಕೈ ನಿಲುಕದು, ಬೆರಸಿ ಹೋದೆಹೆನೆಂದರೆ ಮುನ್ನವೇ ಅಸಾಧ್ಯ" ಇನ್ನು ಆತನು ಒಳ್ಳೆಯವ ಕರುಣಾಕರನು, ಭಕ್ತರನ್ನು ಕಾಯುವವನು, ಶರಣಾಗತ ವತ್ಸಲನು ಎಂದುಕೊಂಡ ಬರಿದೆ 'ಶರಣ' ಎಂದು ಕೊಂಡಾಕ್ಷಣ ಒಲಿಯುವವನಲ್ಲ. "ದೇವನೊಳ್ಳಿದನೆಂದ ಮುಯ್ಯಾನಲು ಬೇಡ! ಕರಕಟ ಕಾಡಿದನೊಳ್ಳಿದನೆ? ಅಳಿಸುವ ನಗಿಸುವನೊಳ್ಳಿದನೆ "ಆದರೂ" ಬೆಚ್ಚದೆ, ಬೆದರದೆ ತೊತ್ತುತನವ ಮಾಡಲು ತನ್ನನೀವ ಎಂದಿರಿ ಬಸವಣ್ಣನವರು ಧೀರವೀರತೆಯಿಂದ ಭಕ್ತಿಯನ್ನು ಸಾಧಿಸಿ ಶಿವನಲ್ಲಿ ಪರಿಪೂರ್ಣ ಶರಣಾಗಿ ಶಿವಪಥದಲ್ಲಿ ಮುಂದುವರಿಯುತ್ತ ಅದರ ಪೂರ್ಣತೆಯ ಶಿಖರವನ್ನು ಅವರ ಮುಟ್ಟಬೇಕಾದರೆ ಪಟ್ಟಶ್ರಮ ಉಪಮಾತೀತವಾದುದು.

"ಸುಖಬಂದರೆ ಪುಣ್ಯದ ಫಲವೆನ್ನೆನು, ದುಃಖ ಬಂದರೆ ಪಾಪದ ಫಲವೆನ್ನೆನು ನೀ ಮಾಡಿದೊಡಾಯಿತ್ತೆಂದೆನ್ನೆನು. ಕರ್ಮಕ್ಕೆ ಕರ್ತೃವೆ ಕಡೆಯೆಂದೆನ್ನೆನು, ಉದಾಸಿ ವಿಡಿದು ಶರಣೆನ್ನೆನು, ಕೂಡಲ ಸಂಗಮದೇವಾ ನೀಮಾಡಿದುಪದೇಶವು ಎನಗೀಪರಿಯ

ಸಂಸಾರವ ಸವೆಯ ಬಳಸುವೆನು ಎಂದುಕೊಂಡು, ಹೊಲೆಯ ಹೊಲೆಯರ ಮನೆಯ ಹೊಕ್ಕು ಸಲೆ ಕೈಕೂಲಿ ಮಾಡಿಯಾದರೆಯೂ ನಿಮ್ಮನಿಲುವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿವೆನಾದರೆ ತಲೆದಂಡ ಕೂಡಲಸಂಗಮದೇವಾ ಎಂದು ದೃಢ ಪ್ರತಿಜ್ಞೆಮಾಡಿ ಭಕ್ತಿಯೆಂಬ ನಿಧಾನವ ಸಾಧಿಸುವರೆ ಶಿವಪ್ರೇಮವೇಂಬಂಜನವ ನೆಚ್ಚಿ-ಕೊಂಡು ಶಿವನ ನೆಲೆಯನ್ನು ಕಂಡು ಹಿಡಿಯಲು ಪ್ರಯತ್ನಿಸಿದರು.

'ಹೊತ್ತಾರೆ ಎದ್ದು ಶಿವಲಿಂಗದೇವನ ದೃಷ್ಟಿಯಾರೆ ನೋಡದವನ ಸಂಸಾರ ವೇನವನ? ಬಾಳುವೆಣನ ಬೀಳುವೆಣನ ಸಂಸಾರವೇನವನ? ಕರ್ತು ಕೂಡಲಸಂಗಮ ದೇವಾ, ನಿನ್ನ ತೊತ್ತು ಗೆಲಸವ ಮಾಡದವನ ಸಂಸಾರವೇನವನ? ಎಂದರ್ಥೈಸಿ ಕೊಂಡು, ಹೊತ್ತಾರೆ ಎದ್ದು ಅಗ್ಘವಣಿ ಪತ್ರೆಯ ತಂದು ಹೊತ್ತು ಹೋಗದ ಮುನ್ನ ಲಿಂಗವ ಪೂಜಿಸಬೇಕು. ಏಕೆಂದರೆ ಹೊತ್ತು ಹೋದ ಬಳಿಕ ನಿನ್ನನ್ನಾರ ಬಲ್ಲರು? ಆದ್ದರಿಂದ ಹೊತ್ತು ಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ಕೂಡಲಸಂಗಮ ದೇವನ ತೊತ್ತು ಗೆಲಸವ ಮಾಡಬೇಕೆಂದುಕೊಂಡು ನಿರ್ಣಯಿಸಿ ತಾವು ಘನನಿರ್ಮಾಯ ಪ್ರಕಾಶೋಜ್ವಲ ಪ್ರಸ್ಫುರಿತ ಶ್ರೀ ಸಂಗಪಾದಾಬ್ಜವಾಸ ಸುಪೂಜಾರಸಮಗ್ನ ಚಿತ್ತರಾಗ ತೊಡಗಿದರು. ಕಾರಣ 'ದೇವ ಪೂಜೆಯ ಮಾಟ ದುರಿತ ಬಂಧನದೋಟ' ವಲ್ಲವೆ!

"ಬರಬರಭಕ್ತಿ ಅರೆಯಾಯಿತ್ತು ಕಾಣಿರಣ್ಣಾ; ಮೊದಲ ದಿನ ಹಣೆ ಮುಟ್ಟೆ, ಎರಡನೆ ದಿನ ಭುಜಮುಟ್ಟೆ, ಮೂರನೆಯದಿನಕೆ ತೂಕಡಿಕೆ" ಉಂಟಾಗುವುದಾದರೆ ಅದು ಭಕ್ತಿಯೆನಿಸಲಾರದು. ಹೊತ್ತಾರೆ ಎದ್ದ ಕುರುಡಂಗೆ ಅಗಸಿಯಲ್ಲಿ ಅಸ್ತ ಮಾನವಾದಂತೆ ಆನುಭಕ್ತಿಯ ಬಯಸಿದರಹುದೆ? ಭಕ್ತಿಯೆಂಬುದ ಮಾಡಬಾರದು, ಮಾಡಿದಮೇಲೆ ಸ್ಥಿರವಾಗಿ ಅದನ್ನು ಕಾಪಾಡಿಕೊಂಡು ಬರಬೇಕು. ಅದರೆ ಅದು ಹೇಳಿಕೊಂಡಂತೆ ಮಾಡಿಕೊಳ್ಳುವುದು ಕಷ್ಟ. ಅದು ಕರಗಸದಂತೆ ಹೋಗುತ್ತ ಕೊಯ್ವುದು, ಬರುತ್ತ ಕೊಯ್ವುದು, ಅದೊಂದು ಘಟಸರ್ಪ ಕೈ ದುಡುಕಿದರೆ ಹಿಡಿದು ಬಿಡುವಂತಹದ್ದು "ಮಾತಿನ ಮಾತಿನಲ್ಲಪ್ಪುದೇ ಭಕ್ತಿ? ಮಾಡಿ ತನು ಸವೆಯದನ್ನಕ್ಕ, ಮನ ಸವೆಯದನ್ನಕ್ಕ, ಧನ ಸವೆಯದನ್ನಕ್ಕ ಅಪ್ಪುದೇ ಭಕ್ತಿ? ಕೂಡಲ ಸಂಗಮದೇವ ಎಲುದೋರೆ ಸರಸವಾಡುವನು, ಸೈರಿಸದನಕ್ಕ ಅಪ್ಪುದೇ ಭಕ್ತಿ? ಹೀಗಿರುವಾಗ ದೃಢಚಿತ್ತವಿಲ್ಲದಿದ್ದರೆ ಭಕ್ತಿಯನ್ನು ಮಾಡಬಾರದು. ಮಾಡಿದರೆ ಮಾತ್ರ ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ, ಅಲ್ಲದಿದ್ದರೆ ನಡು ನೀರಿನಲ್ಲಿ ಅದ್ದುವ ಶಿವ, ಅದಕ್ಕಾಗಿ ವಾರವೆಂದರಿಯದೆ, ದಿನವೆಂದರಿಯದೆ, ಏನೆಂದರಿಯದೆ; ಇರುಳೆಂದರಿಯದೆ ಹಗಲೆಂದರಿಯದೆ ಏನೆಂದರಿಯದೆ ದೇಹಧರ್ಮ ತನ್ನ ಆದಂತೆ ಆಗಲಿ, ನಾನು ಮಾತ್ರ ಕೂಡಲ ಸಂಗನ ಪೂಜಿಸಿದಲ್ಲದೆ ನಿಲ್ಲ ಲಾರೆನು ಎಂಬ ಅಚಲ ವಿಶ್ವಾಸ ಧರಿಸಿ, ಎನ್ನವದನದಲ್ಲಿ ಷಡಕ್ಷರಿಯ ಬರೆಯಯ್ಯಾ

ಎಂದು ಬೇಡಿ. ವಚನದಲ್ಲಿ ನಾಮಾಮೃತ ತುಂಬಿ, ಮನದಲ್ಲಿ ಶಿವನ ನೆನಹು ತುಂಬಿ. ಕಿವಿಯಲ್ಲಿ ಆತನ ಕೀರುತಿ ತುಂಬಿ, ಸಂಗಮದೇವನ ಚರಣಕಮಲದಲ್ಲಿ ತಾನು ತುಂಬಿ, ತಾಳಮಾನಸ, ಓಜೆ ಬಜಾವಣೆ, ಗಣನೆ, ಅಮೃತಗಣ, ದೇವ ಗಣ ಒಂದೂ ತಾನರಿಯನೆಂದೂ ನಿನಗೆ ಕೇಡಿಲ್ಲವಾಗಿ ಅನುವೊಲಿದಂತೆ ಹಾಡು ವೆನೆಂದು ಹಾಡುತ್ತಾ, ಅಂದಂದಿನ ಪೂಜಾ ಕೃತ್ಯವನ್ನು ಅಂದಂದಿಗೆ ಮಾಡಿ, ಯಾವ ಹಂಗು ಹರಿಇಲ್ಲದ ಕಾರಣ ನಿಷ್ಫಲದಾಯಕ ಶುದ್ಧರಾಗಿ ಶಿವಾರ್ಚನೆ ನಡೆಸುತ್ತಾ "ನಾ ನಿಮ್ಮನೆನೆವೆನು ನೀವೆನ್ನನರಿಯಿರಿ, ನಾನೆಂತು ಬದುಕುವೆನೆಂತು ಜೀವಿಸುವೆನಯ್ಯಾ ಕೂಡಲಸಂಗಮದೇವಾ, ಎನಗೆ ಪ್ರಾಣ, ಗತಿ, ಮತಿ, ನೀನೇ ನೋಡಯ್ಯಾ "ಎಂದು ಸಂಗಮೇಶ್ವರನ ಬೆಂಬತ್ತಿ ನಡೆದರು ಅಹರ್ನಿಶಿ ಶಿವಪಥದಲ್ಲವರು

ಹೌದು ! ಆದರೆ ಹೊಳೆಯುವುದೆಲ್ಲ ಚಿನ್ನವೆಂದು ಯಾರಾದರೂ ಸ್ವೀಕರಿಸು ತ್ತಾರೆಯೇ ? ಒರೆಗಲ್ಲಿನಲ್ಲಿ ಬಣ್ಣವೇರಿದಾಗಲೇ ಅದಕ್ಕೆ ಬೆಲೆಕಟ್ಟಿ ಸ್ವೀಕರಿಸುವಂತೆ, ಶಿವನೂ "ಭಕ್ತನಾಗಿ ತನ್ನ ಹಿಡಿದಿಹೆನೆಂಬ ಹೋದರೆ ನುಗ್ಗು ಮಾಡುವ ನುಸಿಯ ಮಾಡುವ, ಮಣ್ಣು ಮಾಡುವ, ಸಣ್ಣಹವನ್ನಕ್ಕ ಅರೆವನು, ಬಣ್ಣಗಾಣ್ಬನ್ನಕ್ಕ ಒರೆವನು, ಹೀಗೆಂದು ಅಂಜಿದರಾಗದು, ಅಳುಕಿದರಾದರು. ಕೊಲುವೆನೆಂಬ ಭಾಷೆ ದೇವನದು ಗೆಲುವೆನೆಂಬ ಭಾಷೆ ಭಕ್ತನದಾಗಿ ಮಾಡಿಕೊಂಡು, ಅರೆದರೆ ಸಣ್ಣನಾಗಿ, ಒರೆದರೆ ಬಣ್ಣವಾಗಿ, ಒಣಗಿಸಿ ಪುಣಪುಣಲನೆ ಮಾಡಿದರೆಯೂ ಹರಣವುಳ್ಳನಕ್ಕ ನಿಮ್ಮ ಚರಣವನೆನೆವುದ ಮಾಣೆ, ಶರಣೆಂಬುದ ಮಾಣೆ, ಎನ್ನ ಹೆಣದ ಮೇಲೆ ಕಂಚಿಟ್ಟುಂಡರೆಯೂ ಮಾಣೆ ಮಾಣೆ ಎಂದುದಿಟದ ಭಕ್ತಿಯ ನಿಲವನ್ನು ಹಿಡಿದು ಲಕ್ಷ್ಯಪ್ರಾಪ್ತಿಯತ್ತ ನಡೆದರು. ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ ಇದ್ದರೇನೋ ಶಿವಶಿವಾ, ಹೋದರೇನೋ ? ಅದು ಊಡದ ಆವಿಂಗೆ ಉಣ್ಣದ ಕರು ಬಿಟ್ಟಂತೆ ಎಂದರ್ಥೈಸಿ ಕೊಂಡು ಜಾಗ್ರತ ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದೊಡೆ ತಲೆದಂಡ ತಲೆದಂಡ, ಹುಸಿಯಾದರೆ ದೇವ ತಲೆದಂಡ ತಲೆದಂಡ ಕೂಡಲ ಸಂಗಮದೇವಾ ನೀವಲ್ಲದೆ ಅನ್ಯರ ನೆನೆದೊಡೆ ತಲೆದಂಡ ತಲೆದಂಡ ಎಂದು ಪಣತೊಟ್ಟು ಸಾಗಿದರು. ಏಕೆಂದರೆ ಭಕ್ತ ನೆರೆ ನಂಬಿದನಾದರೆ ಕಡೆಗೆ ಶಿವ ಆತನನ್ನು ತನ್ನಂತೆ ಮಾಡುವ, ಒಲಿದು ಸಲಹುವ ಎಂಬೀ ಅಚಲ ವಿಶ್ವಾಸವನ್ನು ತಾಳಿ ಮುನ್ನಡೆದರು.

ಅರಿದರಿದು ನಿಮ್ಮ ಶರಣನು ಆಚರಿಸುವಾಚರಣೆಯಕಂಡು ಕಣ್ದೆರೆದು ಅವು ಗಳನ್ನು ತನ್ನ ಜೀವನದಲ್ಲಿಯೂ ತಂದುಕೊಂಡು ಶಿವನನ್ನೊಲಿಸಿಕೊಳ್ಳಲು ಬಯಸಿದರೆ ಆತ ವಶನಾಗುವವನಲ್ಲ "ಶಿವಶಿವಾ; ಅಡವಿಯೊಳಗೆ ಹೊಲುಬುಗೆಟ್ಟ ಪಶುವಿನಂತೆ ಅಂಬೇ ಅಂಬೇ ಎಂದು ಕರೆಯುತ್ತ, ಅಂಬೇ ಎಂದು ಒರಲುತ್ತ, ಸಮುದ್ರ

ದೊಳಗಣ ಸಂಪಿನಂತೆ ಬಾಯಿ ಬಿಡುತ್ತಾ ಇದ್ದು ಸ್ವಾತಿ ಮಳೆಹನಿಗಾಗಿ ಅಯ್ಯಾ, ಅಯ್ಯಾ, ಎಂದು ಕರೆಯುತ್ತಾ ಅಯ್ಯಾ, ಅಯ್ಯಾ, ಎಂದು ಒರಲುತ್ತಾ ಜಗಳೂ ನಿಮ್ಮನ್ನು ಕರೆಯುತ್ತಲಿದ್ದರೂ ಮೌನವೇ ?" ಎಂದು ಗೋಗರೆಯುತ್ತಾ "ನೀ ಹುಟ್ಟಿಸಿದಲ್ಲಿ ಹುಟ್ಟದೆ, ನೀ ಕೊಂದಲ್ಲಿ ಸಾಯದೆ ಎನ್ನ ವಶವೇ ಅಯ್ಯಾ, ಅಕಟಕಟಾ; ಎನ್ನವನು, ಎನ್ನವನು ಎನ್ನಯ್ಯಾ" ಎಂದು ಬೇಡುತ್ತಾ, "ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲಹಯ್ಯಾ, ನಿಮ್ಮ ಮನೆಯ ಮಗನೆನಿಸಯ್ಯಾ, ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ, ಅಧಃಪಾತಕ್ಕಿಳಿಯದಂತೆ ಎನ್ನನ್ನು ಶಿವಬಟ್ಟೆಯೊಳಿರಿಸಿ ರಕ್ಷಿಸಯ್ಯಾ. ಅಕಟಕಟಾ ! ಶಿವಾ ; ನಿನಗಿನಿತು ಕರುಣವಿಲ್ಲಾ, ನಿನಗಿನಿತು ಕೃಪೆಇಲ್ಲಾ, ಏಕೆ ಹುಟ್ಟಿಸಿದೆ ಇಹಲೋಕದುಃಖಿಯ, ಪರಲೋಕ ದೂರನ ? ನನಗಾಗಿ ಮತ್ತೊಂದು ತರುಮರವಿರಲಿಲ್ಲವೆ? ಈ ರೀತಿ ಹುಟ್ಟಿಸಿ ಎನ್ನಲ್ಲಿ ಅವಗುಣವ ನರಸುವುದೆ ಎನ್ನನ್ನು ಶಿವಬಟ್ಟೆಯಲ್ಲಿರಿಸಯ್ಯಾ" ಎಂದು ಅನುಗಾಲವೂ ಶಿವನಲ್ಲಿ ಅಂಗಲಾಚುತ್ತಾ ಪಥ ಸವೆದರು.

ಶಿವಪಥದಲ್ಲಿ ನಡೆಯಬೇಕಾದರೆ ಗುರುವಿನ ಮಾರ್ಗದರ್ಶನವಿಲ್ಲದೆ ಅದು ಸಾಧ್ಯವಿಲ್ಲ. "ಶಿವಪಥವನರಿವರೆ ಗುರುಪಥವೇ ಮೊದಲು." ಹಾಗೆಯೇ "ಕೂಡಲಸಂಗಮದೇವನರಿವರೆ ಶರಣರ ಸಂಗವೇ ಮೊದಲು." ಜೊತೆಗೆ ಪಂಚಮಹಾಪಾತಕಗಳನ್ನು ನಿರ್ನಾಮ ಮಾಡುವ ಭವ ಬಂಧನ ದುರಿತಗಳನ್ನು ಗೆಲ್ಲಬೇಕು-'ಓಂನಮಃ ಶಿವಾಯ' ಎಂಬ ಸರ್ವಜನವಶ್ಯ ಮಂತ್ರಜಪ. ಆದರೆ ತನುವಿನೊಳಗೆ ಹುಸಿತುಂಬಿ, ಮನದೊಳಗೆ ವಿಷಯ ತುಂಬಿಕೊಂಡಿದ್ದರೆ ಶಿವಪಥದ ಸಾಧನೆಯಾಗದೆಂದು ತನು ಮನಧನಗಳನ್ನು ಸ್ವಚ್ಛವಾಗಿರಿಸಿಕೊಂಡು ನಡೆದರು. ಜಂಗಮ ಮುಖದಿಂದೆ ನಿಂದೆ ಬಂದರೆ ಕೊಂಡ ಮಾರಿಂಗೆ ಹೋಹುದು ತಪ್ಪದು. ಒಳಗೆ ಕುಟಿಲ ಹೊರಗೆ ಭಕ್ತರೆನಿಸಿಕೊಂಬವರ ಒಲ್ಲನೊಲ್ಲನಯ್ಯಾ ಲಿಂಗವು. ಅವರು ಸತ್‌ಪಥಕ್ಕೆ ಸಲ್ಲರು ಸಲ್ಲರಯ್ಯಾ, ಒಳಹೊರಗೊಂದಾಗದವರಿಗೆ ಅಳಿಯಾಸೆದೋರಿ ಬೀಸಾಡುವನವರ ಜಗದೀಶನು; ಆದ್ದರಿಂದ ಭಕ್ತಿಯ ಮಾಡುವ ಭಕ್ತರ ಕಾಯ ಬಾಳೆಯ ಕಂಬದಂತಿರಬೇಕು. ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದರೆ ಒಳಗೆ ಕೆಟ್ಟಿಲ್ಲದಿರಬೇಕು ಎಂದುಕೊಂಡು ಒಳಹೊರಗೊಂದಾಗಿ ಕೆಟ್ಟಿಲ್ಲದೆ ಇದ್ದು, ಯಾವ ಮುಖದಲ್ಲೂ ನಿಂದೆ ಬಾರದಂತೆ ಹವಣಿಸಿ ಹೆಜ್ಜೆ ಹೆಜ್ಜೆಯನ್ನು ಮುಂದಿಡುತ್ತಾ ಹೋದರು.

ಹೊತ್ತಾರೆ ಎದ್ದು ಅಗ್ಘವಣಿ ಪತ್ರೆಯ ತಂದು, ಹೊತ್ತುಹೋಗದ ಮುನ್ನ ಲಿಂಗವ ಪೂಜಿಸಿ, ಮೃತ್ಯುವೊಟ್ಟದ ಮುನ್ನ ತೊತ್ತುಗೆಲಸವ ಮಾಡಿ, ನಿಚ್ಚ ನಿಚ್ಚ ಶಿವರಾತ್ರಿಯ ಮಾಡಿ, ಬೇಗ-ಬೇಗ ಅರ್ಚನೆ ಪೂಜೆಯ ಮಾಡಿ, ಅಂದು-ಇಂದು ಮತ್ತೊಂದು ದಿನವೆನ್ನದೆ ಕ್ಷಣ ಕ್ಷಣವೂ 'ಶರಣು,' 'ಶರಣು' ಎಂದೆನ್ನುತ್ತ ಅಷ್ಟ

ವಿಧಾರ್ಚನೆ ಷೋಡಶೋಪಚಾರದ ಪೂಜೆ ಮಾಡಿ, ಮಾಡಿದ ಪೂಜೆ ನೋಡಿ, ಶಿವತತ್ವ ಗೀತವ ಪಾಡಿ, ಶಿವನ ಮುಂದೆ ನಲಿದಾಡಿ ಭಕ್ತಿಸಂಭಾಷಣೆಯ ಮಾಡಿ, ಅಳಿಗೊಂಡರೆ ಅಂಜದೆ, ನಾಸ್ತಿವಾಡಿಹರೆಂದು ನಾಚದೆ, ಶ್ರೀ ಮಹಾದೇವನಿಗೆ ಶರಣೆನ್ನುತ್ತ, ಮನಮುಟ್ಟಿ, ತನು ಮುಟ್ಟಿ, ತನುಮನವೊಲಿದು ಲಿಂಗ ಜಂಗಮ ಪೂಜಿಸುತ್ತ ಸಾಗಿದರೂ ಅವರು 'ತಾಮಸ ಮುಸುಕಿ ಕಂಗಳ ಕೆಡಿಸಿತ್ತೆನ್ನ ಭಕ್ತಿ, ಕಾಮವೆಂಬಗ್ನಿಗೆ ಮುರಿದಿಕ್ಕಿತ್ತೆನ್ನ ಭಕ್ತಿ, ಉದರಕ್ಕೆ ಕುದಿ ಕುದಿದು ಮುಂದುಡಿಸಿತೆನ್ನ ಭಕ್ತಿ, ಇದಿರನಾಶ್ರಯಿಸಲು ಹೋಯಿತ್ತೆನ್ನ ಭಕ್ತಿ, ಹೆಣಮೂಳನು ನಾನು ಕೂಡಲ ಸಂಗಮ ದೇವಾ, ಕ್ಷಣ ಹದುಳವಿಂದೆ ಟೊಣೆದೇ ಹೋಯಿತೆನ್ನ ಭಕ್ತಿ" ಎಂದು ತನ್ನಲ್ಲಿ ಕೊರತೆ ಉಳಿದಿದೆಯೇ? ಎಂದು ಯೋಚಿಸುತ್ತ, ಇಂದ್ರಿಯಲಾಲಸೆಗೆ ಬಲಿ ಬೀಳದೆ, ಹಮ್ಮು ಬಿಮ್ಮುಗಳನ್ನು ಮಡಿ ಮಾಡಿ, ಬಿಗಿ ಬೆಳೆದ ಗೊನೆಬಾಳೆಯಂತೆ ಬಾಗಿಕೊಂಡಿದ್ದಡೆ ಬೇಡಿದ ಪದವಿಯನೀವ ಕೂಡಲ ಸಂಗಮದೇವನೆಂದು, ಸದಾ ಬಾಗಿದ ತಲೆಯು ಮುಗಿದ ಕೈಯುವನಾಗಿದ್ದುಕೊಂಡು, ತನುವ ಕೊಟ್ಟು ಗುರುವ ನೊಲಿಸಿ, ಮನವ ಕೊಟ್ಟು ಲಿಂಗವನೊಲಿಸಿ, ಧನವ ಕೊಟ್ಟು ಜಂಗಮವನೊಲಿಸಿ, ತ್ರಿವಿಧ ದಾಸೋಹವನ್ನು ಪರಿಪಾಲಿಸುತ್ತಾ, ಇರಿಸಿಕೊಂಡರೂ ತರಿಸಿಕೊಂಡರೂ ಕೊರೆಯಿಸಿಕೊಂಡರೂ ಜರೆಯಿಸಿಕೊಂಡರೂ ಭಕ್ತರಾಗಿಯೇ ಇದ್ದು, ಸಂಗನ ಶರಣರ ಮೇಲೆ ಮುನಿಸು ತಾಳದೆ, ಭಕ್ತಿಯನ್ನು ಬೆಳೆಯಿಸಿಕೊಳ್ಳುತ್ತಾ, ಉದಯಾಸ್ತ ಮಾನವೆನ್ನ ಬೆಂದ ಬಸುರಿಂಗೆ ಕುದಿಯಲಲ್ಲದೆ ನಿಮ್ಮ ನೆನೆಯಲು ತೆರಹಿಲ್ಲಯ್ಯಾ ಎಂದು ಸಂಕಟ ಪಡುತ್ತಾ ಆದರೂ ಲಿಂಗಕ್ಕಲ್ಲದೆ ಮಾಡೆ ನೀ ಮನವನು, ಜಂಗಮಕ್ಕಲ್ಲದೆ ಮಾಡೆನೀಧನವನು, ಪ್ರಸಾದಕ್ಕಲ್ಲದೆ ಮಾಡೆ ನೀತನುವನು, ಲಿಂಗಜಂಗಮ ಪ್ರಸಾದ ಕ್ಕಲ್ಲದೆ ಬಾಯ್ದೆರೆಯೆನೆಂಬುದೆನ್ನ ಭಾಷೆ. ಅನರ್ಪಿತವಾದರೆ ಕಪ್ಪೆನ್ನದು. ಮೂಗ ಕೊಯಿ ಕೂಡಲಸಂಗಮದೇವಾ ಎಂದು ದೃಢ ಮನಸ್ಕರಾಗಿ ನಡೆದು, ಒಂದುವ ನ್ನರಿಯದ ಸಂದೇಹಿ ನಾನಯ್ಯಾ. ನಂಬಿಕೆಯಿಲ್ಲದ ಥಂಬಕ ನಾನಯ್ಯಾ, ನಿಮ್ಮ ನಂಬಿದ ಶರಣರ ಡಿಂಗರಿಗ ನಾನಯ್ಯಾ ಎಂದು ವಿನಂತಿಸಿಕೊಳ್ಳುತ್ತಾ ಕೂಡಲ ಸಂಗನ ಶರಣರ ಒಕ್ಕುದನುಂಬ ಕಿಂಕರ ನಾನು, ಹಾಗಿರುವಾಗ ತೊತ್ತಿಂಗೇಕೆ ಲಕ್ಷಣ ಬಂಟಂಗೇಕೆ ಅಚಾರ? ಆಗಮವೇಕೆ ಡಿಂಗರಿಗಂಗೆ? ಒಕ್ಕುದನುಂಬವಂಗಯ್ಯಾ? ಕೂಡಲಸಂಗಮದೇವಾ, ನಿಮ್ಮ ನಂಬುವುದು ಆಚಾರವಯ್ಯಾ ಎಂದು ಕಿರಿಯವನಾದ ತನಗೆ ನಂಬಿಕೆಯೆ ಮುಖ್ಯವೆಂದು ಹೇಳಿಕೊಳ್ಳುತ್ತ, ಆ ನಂಬಿಕೆಯಿಂದಲೇ ನಂಬಿದ ಪಥದಲ್ಲಿ ಮುನ್ನಡೆಯುಲು ಪ್ರವೃತ್ತರಾಗಿ ಸಾಗಿದರು.

ಈನಂಬಿಗೆಯನ್ನೇ ಪ್ರಧಾನವಾಗಿಟ್ಟುಕೊಂಡು ಚಿತ್ರವು ನಿಮ್ಮನ್ನು ಧ್ಯಾನಿಸ ಬೇಕೆಂದಿದ್ದರೆ, ಸುಚಿತ್ತದಿಂದಲೆನ್ನ ಮನವು ನಿಮ್ಮ ನೆನೆಯಲೊಲ್ಲದು, ಎನಗಿನ್ನಾವುದುಗತಿ ಎಂತಯ್ಯಾ? ಎನ್ನಗಿನ್ನಾವುದು ಮತಿ ಎಂತಯ್ಯಾ, ಹರಹರಾ ಕೂಡಲ ಸಂಗಮದೇವಾ, ಮನವಸಂತೈಸೆನ್ನಾ ಏಕೆಂದರೆ ಇನ್ನೇವೆ ನಿನ್ನೇವೆನಯ್ಯಾ? ಎನ್ನ ಮನವೆಂಬ ಮರ್ಕಟನದಾಳಿ ಘನವಾಯಿತ್ತು. ಎನ್ನನಿಂದಲಿ ನಿಲ್ಲಲೀಯದು, ಎನ್ನ ಕುಳಿತಲ್ಲಿ ಕುಳ್ಳಿರಲೀಯದು; ಕ್ಷಣದಲ್ಲಿ ಪಾತಾಳಕ್ಕೈದುತಿದೆ; ಕ್ಷಣದಲ್ಲಿ ಆಕಾಶಕ್ಕೈದುತಿದೆ, ಕ್ಷಣದಲ್ಲಿ ದಿಗ್ದೇಶಕ್ಕೈದುತಿದೆ; ಎಂದಾದರೂ ಕೂಡಲಸಂಗಮದೇವಾ, ಈ ಮನವೆಂಬ ಮರ್ಕಟನ ಧಾಳಿಯನಿಂದಿಗೆ ನೀಗಿ ನಿಮ್ಮೊಡಗೂಡುವೆನಯ್ಯಾ 'ಎಂದು ಚಲವಿಡಿದು, ಮನಸ್ಸನ್ನು ಬಗ್ಗಿಸಿ ಪಥಸಾಗಿದರು. ಹಾಗೆ ಸಾಗುವಾಗ 'ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು ನೀನಲ್ಲದೆ ಮತ್ತಾರ್ಯರೂ ಇಲ್ಲಯ್ಯಾ ಕೂಡಲಸಂಗಮದೇವಾ, ಹಾಲಲ್ಲದ್ದು, ನೀರಲ್ಲದ್ದು ಎಂದು ದೃಢಭಾವದಿಂದ ಶಿವನನ್ನೆ ಶರಣುಹೋಗಲು, ಭವರೋಗ ವೈದ್ಯನೆಂದು ನಾನಿಮ್ಮ ಮರೆಹೊಕ್ಕೆ ಭಕ್ತಿದಾಯಕ, ನೀಕರುಣಿಸು ಲಿಂಗ ತಂದೆ, ಜಯ ಜಯ ಶ್ರೀ ಮಹಾದೇವ, ಜಯ ಜಯ-ಶ್ರೀ ಮಹಾದೇವ, ಜಯ ಜಯ ಶ್ರೀಮಹಾದೇವ, ಎನುತ್ತ ಇದ್ದಿತೆನ್ನ ಮನವು ಎಂದು ನಿವೇದಿಸಿ ಕೊಳ್ಳುತ್ತ, ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲ ವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲಸಂಗಮದೇವಾ ಎಂದು ಹಠವಾದಿಯಾಗ ಬೇಕಾಯಿತು. ಏಕೆಂದರೆ ನಿಚ್ಚ ನಿಚ್ಚ ಪ್ರಾಯಶ್ಚಿತ್ತನೊಲ್ಲ ಕೂಡಲಸಂಗಮದೇವನು ಅಲ್ಲದೆ! ಇದರ ಫಲವಾಗಿ ಅವರ ಉಭಯ ಕರ್ಮವ ಕಳೆದು ತನ್ನೊಳಗೆ ಇಂಬಿಟ್ಟು ಕೊಳ್ಳಲು ಬಂದ ಕೂಡಲಸಂಗಮದೇವ ಕೃಪಾಮೂರ್ತಿ.

ಆದರೆ ಬಂದುದೆಂದು? ಕೆಲವು ದಿನಗಳಲ್ಲಿ? ಕೆಲವು ತಿಂಗಳುಗಳಲ್ಲಿ? ಅಲ್ಲ, ಒಂದೆರಡು ವರುಷಗಳಲ್ಲಿ? ಇಲ್ಲ. ಅಷ್ಟು ಬೇಗ, ಅಷ್ಟು ಸುಲಭದಲ್ಲಿ ಬರಲಿಲ್ಲ ಆ ಕೃಪಾಮೂರ್ತಿ 'ಮೆಲ್ಲ ಮೆಲ್ಲನೆ ಭಕ್ತನೆನಿಸಿಕೊಂಬೆ, ಮೆಲ್ಲ ಮೆಲ್ಲನೆ ಮಾಹೇಶ್ವರನೆನಿಸಿಕೊಂಬೆ, ಮೆಲ್ಲ ಮೆಲ್ಲನೆ ಪ್ರಸಾದಿ ಎನಿಸಿಕೊಂಬೆ, ಮೆಲ್ಲ ಮೆಲ್ಲನೆ ಪ್ರಾಣಲಿಂಗ ಎನಿಸಿಕೊಂಬೆ, ಮೆಲ್ಲ ಮೆಲ್ಲನೆ ಶರಣನೆನಿಸಿಕೊಂಬೆ, ಮೆಲ್ಲ ಮೆಲ್ಲನೆ ಐಕ್ಯನೆನಿಸಿಕೊಂಬೆ, ಮೆಲ್ಲ ಮೆಲ್ಲನೆ ಷಟ್‌ಸ್ಥಲವ ಮೀರಿ ನಿರಯುವ ಸ್ಥಲವನೆಯ್ದುವೆನಯ್ಯಾ ಕೂಡಲ ಸಂಗಮದೇವಾ ಎಂದು ಭಕ್ತಿಯನ್ನು ಹಮ್ಮಿ ಒಂದೊಂದೆ ಸ್ಥಲವನ್ನೇರುತ್ತ ಸಾಗುತ್ತ ಹನ್ನೆರಡು ವರ್ಷ ಹಿಂದಾಯಿತು. ಆದರೆ ಏನಾದಡೇನಯ್ಯ? ಎನ್ನಲ್ಲಿ ದಿಟವಿಲ್ಲನ್ನಕ್ಕರ ಎಂದು ಕೊಂಡು ತನು ಮನ ಧನಗಳನ್ನು ಗುರುಲಿಂಗ ಜಂಗಮಕ್ಕೆ ನೀಡಿ ತ್ರಿವಿಧ ಶುದ್ಧರಾಗಿ ಭಕ್ತಿರತಿಯಿಂದ ಎನ್ನ ಗಂಡ ಬರಬೇಕೆಂದು ಎನ್ನಂತರಂಗವೆಂಬ ಮನೆಯ ತೆರಹಮಾಡಿ, ಅಷ್ಟದಳ ಕಮಲವೆಂಬ ಓವರಿಯೊಳಗೆ ನಿಜ ನಿವಾಸವೆಂಬ ಹಾಸುಗೆಯ ಹಾಸಿ, ಧ್ಯಾನ ಮೌನವೆಂಬ ಮೇಲು ಕಟ್ಟುಕಟ್ಟಿ, ಜ್ಞಾನವೆಂಬ ದೀಪವ ಬೆಳಗಿ,

ನಿಷ್ಕ್ರಿಯುಗಳೆಂಬು ಪಕರಣಂಗಳ ಹರಹಿಕೊಂಡು, ಪಶ್ಚಿಮದ್ವಾರವೆಂಬ ಬಾಗಿ
ತೆರೆದು, ಕಂಗಳೇ ಪ್ರಾಣವಾಗಿ ಹಾರೈಸುತ್ತಾ ಕಳೆದರು. ಕೊನೆಗೆ ನಾನು ಬಾರೆನೆಂ
ಉಮ್ಮಳಿಸಿಹನೆಂದು ತಾನೇ ಬಂದು ಎನ್ನ ಹೃದಯ ಸಿಂಹಾಸನದ ಮೇಲೆ ಕೂಡ
ಸಂಗಮೇಶ್ವರನು ಮೂರ್ತಿಗೊಳ್ಳಲು" ಅವರ ಮನದ ಬಯಕೆ ಸಯವಾಯ್ತು
ಈ ಹನ್ನೆರಡು ವರ್ಷದ ಬಯಕೆ ಕೈಗೂಡಿ ಚಿಂತೆಯಿಂದ ನಿಶ್ಚಿಂತೆಯಾಯಿತು.

ಹೀಗೆ ಎದೆಬಿರಿವನ್ನಕ್ಕ, ಮನದಣಿವನಕ್ಕ ನಾಲಿಗೆ ನಲಿನಲಿದಾಡುವನ್ನಕ
ನಿಮ್ಮ ನಾಮಾಮೃತವ ತಂದೆರಸು ಕಂಡಯ್ಯಾ ಎನಗೆನ್ನ ತಂದೇ, ಬಿರಿಮುಗ
ಳಂದದಿ ಎನ್ನ ಹೃದಯಂ ನಿಮ್ಮ ಶ್ರೀ ಚರಣದ ಮೇಲೆ ಬಿದ್ದರಳುಗೆ, ನಿವ
ಉದರವ ಬಗಿದಾನು ಹೋಗುವ ಭರವೆನಗೆ, ಅದಕ್ಕಾಗಿ ಎನ್ನ ಗುಣವ ನೋಡ
ಕರುಣದಿಂದ ಭಕ್ತಿಯ ನಿಲವ ತೋರಾ ಎಂದು ಬೇಡುತ್ತ, ಸಕ್ಕರೆಯ ಕೊಡ
ತುಂಬಿ ಹೊರಗೆ ಸವಿದರೆ ರುಚಿಯುಂಟೆ? ತಕ್ಕೈಸಿ ಭುಜ ತುಂಬಿ ಲಿಂಗಸ್ಪರ್ಶನ
ಮಾಡದೆ ಅಕಟಾ; ಸಂಸಾರ ವೃಥಾ ಹೋಯಿತಲ್ಲಾ; ಅದೇತರ ಭಕ್ತಿ,? ಅದ
ತರಯುಕ್ತಿ ? ಕೂಡಲಸಂಗಮದೇವಾ, ಎನ್ನಂತರಂಗ ನೀವಯ್ಯಾ, ಎನ್ನಬಹಿರಂ
ನೀವಯ್ಯಾ, ಎನ್ನ ಅರಿವು ನೀವಯ್ಯಾ, ಎನ್ನಮರಹು ನೀವಯ್ಯಾ, ಎನ್ನ ಭಕ್ತಿ
ನೀವಯ್ಯಾ, ಎನ್ನ ಯುಕ್ತಿ ನೀವಯ್ಯಾ, ಎನ್ನಾಲಸ್ಯ ನೀವಯ್ಯಾ, ಎನ್ನಪರವ
ನೀವಯ್ಯಾ. ಸಮುದ್ರವ ಹೊಕ್ಕ ಕಾಲು ತೊಳೆದಲ್ಲಿ ಕೊರತೆಯ ನರಸುವುದೆ
ಆ ಸಮುದ್ರವು ? ಎನ್ನ ಲೇಸುಹೊಲ್ಲೆಯುವೆಂಬುದ ನೀವೆ ಬಲ್ಲಿರಿ ಇದಕ್ಕೆ ನಿವ
ಪಾದವೇಸಾಕ್ಷಿ, ಎನ್ನ ಮನವೇಸಾಕ್ಷಿ ಎಂದುಕೊಂಡು ಅವರು ಸಾಗಿದರೆ, ಆ ಭಕ್ತಿ
ರತಿಯ ವಿಕಳತೆಯಯುಕ್ತಿಯನ್ನು ಯಾರಾದರೂ ಏನಕೇಳಿ ಯಾರು? ಲಜ್ಜೆಗೆಟ್ಟು
ನಾಣ:ಗೆಟ್ಟು, ಕುಲಗೆಟ್ಟು, ಛಲಗೆಟ್ಟು, ಭವಗೆಟ್ಟು, ಕೊನೆಗೆ ಹುಟ್ಟುಗೆಟ್ಟು
ಹೋಯಿತು. ತದೇಕಭಾವದಿಂದ ಕೂಡಲಸಂಗಮನನ್ನು ಪೂಜಿಸಿ, ಧ್ಯಾನಿಸಿ ಸಮರ
ಸಮುಕಳೆ ಸಮಸುಖವರಿದು, ನದಿಯೊಳಗೆ ನದಿ ಬೆರಸಿದಂತೆ ಅವನಲ್ಲಿ ಒಂದಾದರು
"ಅಲ್ಲಿಕಲ್ಲಹುಳಿನಂತೆ, ಅರಗಿನ ಪುತ್ಥಳಿಯಂತೆ. ತನುಕರಗಿ ನೆರೆವ ಸುಖ ನಾನೇನೆಂಬೆ
ಕಡೆಗೋಡಿ ವರಿದುವೆನಗಯ್ಯಾ ನಯನದಸುಖ ಜಲಂಗಳು, ನಮ್ಮ ಕೂಡಲಸಂಗಮ
ದೇವರ ಮುಟ್ಟಿನೆರೆವ ಸುಖ ನಾನಾರಿಗೇಂನೆಂಬೆ" ಎಂದು ಉದ್ಗರಿಸುವಂತಾಯಿತು.
ಬೇಗಹೊಳಗಣಬೆಳಗು ಮಹಾ ಬೆಳಗೆಂಬ ಪ್ರಸಾದದಲ್ಲೊದಗಿ ಪ್ರಸಾದಿಯ ಪರಿಣಾಮ
ಉಪಮಿಸಲಾಗದ ಪರಮಾನಂದವನ್ನು ಅನುಭವಿಸಿದರು. ಸ್ವಯಲಿಂಗದನುಭಾವವ
ಬೆರೆಕೊಂಡು ದೇವಲೋಕ ಮರ್ತ್ಯಲೋಕವೆಂಬೆರೆಡರಲ್ಲೂ ಯಾವ ಭೇದವನ್ನೂ
ಕಾಣದೆ ಹೋದರು. ಶಿವಾನುಭಾವವನ್ನು ಪಡೆದು ತನುಮನ ಹಾಳಾಗಿ, ಕರ್ಮ
ಛೇದನವಾಗಿ ಬೆಳಗಿದ ಕಾರಣ ಶಿವನವರು ಅವರಲ್ಲಿರುವ ಭಕ್ತಿಯೆಂಬ ಒಡವೆಯನ್ನು
ದಿಟಮಾಡಿ ತೋರಿದರು. ಶಿವನಾ ನಿಷ್ಪತ್ತಿಯೆಂಬ, ಪರಿಪೂರ್ಣತೆಯನ್ನು ಹೊಂದಿರು
ದೆಂಬ ಹಣ್ಣನ್ನು ತನಗೆ ಬೇಕೆಂದೆತ್ತಿಕೊಂಡನು. ಹಣ್ಣುಪಕ್ವವಾಗಲು ಮಾತ್ರ
ಹನ್ನೆರಡು ವರ್ಷಗಳ ಕಾಲ ಅದು ಬೆಳೆಯ ಬೆಳಕಾಯಿತು.

ಏನೆಂಬೆ ಏನೆಂಬೆ ಒಂದೆರಡಾದುದ? ಏನೆಂಬೆ ಏನೆಂಬೆ ಎರಡೊಂದಾದುದ?
ಏನೆಂಬೆ ಏನೆಂಬೆ ಅವಿರಳ ಘನವ? ಮಹಾದಾನಿ ಕೂಡಲಸಂಗಮದೇವಯ್ಯ ತಾನೆಬಲ್ಲ.

# ವಿಜ್ಞಾನ ಮತ್ತು ಆಧ್ಯಾತ್ಮ

ಎಚ್.ಎಸ್. ಲಕ್ಷ್ಮಯ್ಯ ಗಾರ್ಡನ್ 14ನೇ ಕ್ರಾ, ನರಸಿಂಹಜೀಯರ್, ಸೋಮೇಶ್ವರಪುರಂ, ತುಮಕೂರು-2

ವೇದಗಳು ಅತ್ಯಂತ ಪ್ರಾಚೀನವಾದವುಗಳು, ಡಾ॥ರಾಧಾಕೃಷ್ಣರವರ ಅಭಿಪ್ರಾಯದಂತೆ The Vedas might have been written 3000 B.C. but Composed much earlier" ಎಂದಿದ್ದಾರೆ. ಈಗ್ಗೆ 5000 ವರ್ಷಗಳ ಹಿಂದೆ ಗ್ರಂಥರೂಪದಲ್ಲಿ ಬರೆಯಲ್ಪಟ್ಟದ್ದರೂ ಇವುಗಳ ರಚನೆಯಾದದ್ದು ಇನ್ನೂ ಬಹಳ ಹಿಂದೆ ಎಂದು ತಿಳಿಸಿದ್ದಾರೆ. ವೇದ ಎಂಬ ಪದದ ಅರ್ಥ ಜ್ಞಾನದ ಚಿಲುಮೆ (Fountain Head of knowledge) ಮತ್ತು ಮಿತಿಯಿಲ್ಲದ ಜ್ಞಾನವನ್ನು ಹೊಂದಿರುವ ಕಣಜ (illimitable store house of Knowledge). ವೇದಗಳಲ್ಲಿ ಕೇವಲ ಆಧ್ಯಾತ್ಮ ವಿಚಾರಗಳಲ್ಲದೆ ಭೌತ ಪ್ರಪಂಚಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆಯೂ ಅಪಾರ ಜ್ಞಾನ ಸಂಗ್ರಹವಾಗಿದೆ.

ನಾಲ್ಕು ವೇದಗಳ ಉಪವೇದಗಳಲ್ಲಿ ವೈಜ್ಞಾನಿಕ ವಿಷಯಗಳನ್ನು ಪ್ರತಿಪಾದಿಸಿರುವುದನ್ನು ಪರಿಶೀಲಿಸಿ ವಿಜ್ಞಾನಿಗಳೇ ಈ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಋಗ್ವೇದದ ಉಪವೇದವೇ ಆಯುರ್ವೇದ. ಇದರಲ್ಲಿ ವೈದ್ಯ ವಿಜ್ಞಾನಕ್ಕೆ ಸಂಬಂಧಿಸಿದ ವಿಷಯಗಳಿವೆ. ಯಜುರ್ವೇದದ ಉಪವೇದ ಧನುರ್ವೇದ. ಇದರಲ್ಲಿ ಯುದ್ಧ ವಿಜ್ಞಾನಕ್ಕೆ Military science ಬೇಕಾದ ಅಂಶಗಗು ಅಡಗಿವೆ. ಸಾಮವೇದದ ಉಪವೇದವಾದ ಗಂಧರ್ವ ವೇದದಲ್ಲಿ ಸಂಗೀತ ನೃತ್ಯ ಹಾಗೂ ಕಲೆಗೆಸಂಬಂಧಿಸಿದ ವಿಚಾರಗಳಿವೆ. (science of music and dancing) ಇನ್ನು ಅಥರ್ವವೇದದ ಉಪವೇದವಾದ ಸ್ಥಪತ್ಯವೇದದಲ್ಲಿ ಶಿಲ್ಪಶಾಸ್ತ್ರ, ಯಂತ್ರವಿದ್ಯೆ, ತಾಂತ್ರಿಕಶಾಸ್ತ್ರ ಮತ್ತು ಗಣಿತ ಶಾಸ್ತ್ರಗಳ ಬಗ್ಗೆ ವಿವರಣೆ ಇದೆ. ವೇದಗಳ ಕಾಲದಲ್ಲಿಯೂ ವಿಜ್ಞಾನ ಬೆಳೆದಿತ್ತು ಎಂಬುದಕ್ಕೆ ಉಪವೇದಗಳೇ ಆಧಾರವಾಗಿವೆ.

ಈಗ ಸ್ಥಪತ್ಯವೇದದಲ್ಲಿ ಕಂಡು ಬರುವ ಗಣಿತಶಾಸ್ತ್ರದ ವಿಚಾರವಾಗಿ ಪರಿಶೀಲಿಸೋಣ. ಇಂದಿಗೆ ಸುಮಾರು ಐದಾರು ಸಹಸ್ರ ವರ್ಷಗಳಷ್ಟು ಪೂರ್ವದಲ್ಲಿಯೇ ಗಣಿತ ಶಾಸ್ತ್ರದ ವಿವಿಧ ಅಂಗಗಳಾದ ಅಂಕಗಣಿತ, ಬೀಜಗಣಿತ, ರೇಖಾಗಣಿತ, (plane and solid) ತ್ರಿಕೋನಮಿತಿ (Trigonometry plane and spherical,) Conics-geometrical and analyfical, ಖಗೋಳಶಾಸ್ತ್ರ, ಕಲನಶಾಸ್ತ್ರ, Calculus-differential and integral, ಈ ವಿಷಯಗಳನ್ನೆಲ್ಲಾ ಪ್ರಸ್ತಾಪ ಮಾಡಿದ್ದಾರೆಂದಮೇಲೆ ಅನೇಕರಿಗೆ ಆಶ್ಚರ್ಯವಾಗಬಹುದು. ನೇಪಾಳ ಹಿಂದೂ ವಿಶ್ವವಿದ್ಯಾನಿಲಯದ ಸಂಸ್ಕೃತ ವಿಭಾಗದ ಮುಖ್ಯಸ್ಥರಾಗಿದ್ದ ವಿ. ಎಸ್. ಅಗರವಾಲಾರವರು, ಪುರಿ ಗೋವರ್ಧನ ಮಠದ ಶಂಕರಾಚಾರ್ಯರಾಗಿದ್ದ ಜಗದ್ಗುರು ಸ್ವಾಮಿ

ಶ್ರೀ ಭಾರತಿಕೃಷ್ಣ ತೀರ್ಥಜಿ ಮಹಾರಾಜ್‌ರವರು ರಚಿಸಿರುವ "Vedic-Mathematics" ಎಂಬ ಗ್ರಂಥದ ಪ್ರಕಾಶನದಲ್ಲಿ ಈ ರೀತಿ ಬರೆದಿದ್ದಾರೆ. We are agreebly astonished and intensely gratified to find that exceedingly tough mathematical problems which the mathematically most advanced present day western scientific world had spent huge lots of time, energy and money on and which even now it solves with the utmost difficulty involving numbers of difficult, tedious and Cumbersome steps of working, Can easily and readily solved with the help of ultra-easy Vedic sutras of the Atharva Veda. ಗಣಿತ ಶಾಸ್ತ್ರದಲ್ಲಿ ಅಪಾರವಾಗಿ ಮುಂದಿರುವ ಪಾಶ್ಚಾತ್ಯರು.

ಈಗಲೂ ಬಹಳ ಕಾಲ, ಶಕ್ತಿ, ಹಣವ್ಯಯ ಮಾಡಿ ಸುತ್ತು ಬಳಸಿದ ಕ್ರಮಗಳಿಂದ ಅಪಾರ ಶ್ರಮಪಟ್ಟು ಬಿಡಿಸಬಲ್ಲ ಅತಿ ಕ್ಲಿಷ್ಟ ಸಮಸ್ಯೆಗಳನ್ನೆಲ್ಲಾ ಅಥರ್ವವೇದದ ಸೂತ್ರಗಳಿಂದ ಲೀಲಾಜಾಲವಾಗಿ ಬಿಡಿಸಬಹುದು ಎಂಬುದನ್ನು "Vedic Mathematics ಗ್ರಂಥದಿಂದ ತಿಳಿದು ತುಂಬಾ ಆಶ್ಚರ್ಯವೂ ಹಾಗೂ ಕೃತಜ್ಞತೆಯೂ ಉಕ್ಕಿ ಬರುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಪೂರ್ವಾಶ್ರಮದಲ್ಲಿ ವೆಂಕಟರಾಮ ಎಂಬ ಹೆಸರಿನಿಂದ ಮದ್ರಾಸ್ ಪ್ರಾಂತ್ಯದಲ್ಲಿನ ರಾಜಮಹೇಂದ್ರಿ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದ ಪುರಿ ಜಗದ್ಗುರುಗಳು ಸಂಸ್ಕೃತ, ಇಂಗ್ಲಿಷ್, ತತ್ವಶಾಸ್ತ್ರ ಗಣಿತ, ಚರಿತ್ರೆ ವಿಜ್ಞಾನ ಮುಂತಾದ ಏಳು ವಿಷಯಗಳಲ್ಲಿ ಸ್ನಾತಕೋತ್ತರ ಪದವಿ (Master degrees) ಪಡೆದ ಘನವಿದ್ವಾಂಸರಾಗಿದ್ದರು. ಇವರು ಕರ್ನಾಟಕ ರಾಜ್ಯದ ಶೃಂಗೇರಿ ಜಗದ್ಗುರುಗಳಾಗಿದ್ದ ಶ್ರೀ ನೃಸಿಂಹ ಭಾರತಿ ಸ್ವಾಮೀಜಿಯವರ ಶಿಷ್ಯರಾಗಿ ಎಂಟುವರ್ಷಗಳ ಕಾಲ ವೇದಾಂತವನ್ನು ಅಭ್ಯಾಸಮಾಡಿ, ಬಿಡುವಿನ ವೇಳೆಯಲ್ಲಿ ಪಕ್ಕದ ಅರಣ್ಯದಲ್ಲಿ ತಪಸ್ಸನ್ನೂ ಆಚರಿಸಿ ಸಿದ್ಧಿ ಪಡೆದ ಸಿದ್ಧ ಪುರುಷರು. ಘನ ವಿದ್ವಾಂಸರೂ, ಆಧ್ಯಾತ್ಮ ಗುರುಗಳೂ ಆದ ಇವರು 1919ರಲ್ಲಿ ಪುರಿ ಜಗದ್ಗುರು ಶಂಕರಾಚಾರ್ಯರಾಗಿ ಗದ್ದುಗೆಗೆ ಏರಿ ಅಮೆರಿಕ, ಇಂಗ್ಲೆಂಡ್ ದೇಶಗಳಿಗೂ ಪ್ರವಾಸ ಕೈಗೊಂಡು ವೇದಗಳಲ್ಲಿ ಅಡಗಿರುವ ಆಧುನಿಕ ಗಣಿತವಿಚಾರವನ್ನು ವಿದೇಶಗಳ ವಿದ್ವಾಂಸರ ಮುಂದೆ ಮಂಡಿಸಿ ಅವರನೆಲ್ಲಾ ಬೆರಗುಗೊಳಿಸಿದ ಮಹಾನ್ ಪಂಡಿತೋತ್ತಮರು. ಭಾರತೀಯ ಗಣಿತಶಾಸ್ತ್ರವನ್ನು ಅರ್ಥೈಸಿಕೊಂಡ ಪಾಶ್ಚಾತ್ಯ ವಿದ್ವಾಂಸರು; ಪ್ರೊ|| ಡಿ. ಮಾರ್ಗನ್‌ರವರು ಹೇಳಿರುವಂತೆ "ಪಾಶ್ಚಾತ್ಯರ ಅತಿ ಮುಂದುವರೆದಿರುವ ಈಗಿನ ಗಣಿತಶಾಸ್ತ್ರವೂ ಸಹ ನಮ್ಮನ್ನು ಭಾರತೀಯರ ಗಣಿತದ ಬಾಗಿಲಿನವರೆಗೂ ಕೊಂಡೊಯ್ಯಲಾಗಿಲ್ಲ" ಎಂಬುದನ್ನು ಒಪ್ಪಿಕೊಂಡರು.

ಗಣಿತವು ವಿಜ್ಞಾನ ಬೆಳವಣಿಗೆಗೆ ಮುಖ್ಯ ಆಧಾರ. ಅದನ್ನು "Mathematics is the Queen of Science" ಎಂದಿದ್ದಾರೆ ಹಿರಿಯರು. ಇಂತಹ ಅಪಾರ ಜ್ಞಾನವನ್ನು ಹೊಂದಿರುವ ನಮ್ಮ ಗ್ರಂಥಗಳ ಬಗ್ಗೆ ಅನೇಕರಿಗೆ ತಾತ್ಸಾರ ಮನೋಭಾವ ನೆಯಿದೆ. ಕೆಲವರಂತೂ ಇವನ್ನೆಲ್ಲಾ ಬೂಸಾ ಸಾಹಿತ್ಯಕ್ಕೇ ಸೇರಿಸ ಹೊರಟ್ಟಿದ್ದಾರೆ, ಅಂತಹವರು ಕುತೂಹಲಕ್ಕಾಗಿಯಾದರೂ ಪುರಿ ಜಗದ್ಗುರುಗಳು ಬರೆದಿರುವ "Vedic Mathematics" ಎಂಬ ಗ್ರಂಥವನ್ನು ಅವಲೋಕಿಸಿದರೆ ನಮ್ಮ ಸಂಸ್ಕೃತಿಯ ಹಿರಿಮೆಯನ್ನು ಅರಿಯಬಹುದಾಗಿದೆ. ಇದರಲ್ಲಿ ಗ್ರಂಥಕರ್ತರು ಹದಿನಾರು ಸೂತ್ರಗಳನ್ನು ನಮೂದಿಸಿದ್ದಾರೆ.

ಈ ಹದಿನಾರು ಸೂತ್ರಗಳ ಸಹಾಯದಿಂದ ಗಣಿತಶಾಸ್ತ್ರದ ಎಲ್ಲಾ ಸಮಸ್ಯೆಗಳನ್ನೂ ಸುಲಭವಾಗಿ ಬಿಡಿಸಬಹುದೆಂಬುದನ್ನು ಉದಾಹರಣೆ ಸಮೇತ ವಿವರಿಸಿದ್ದಾರೆ. ಈ ಪುಸ್ತಕವು ಬೆಂಗಳೂರಿನ ಚಾಮರಾಜಪೇಟೆಯ ಆರನೇಮೆಯಿ.ರ್ ರಸ್ತೆಯಲ್ಲಿರುವ ವೇದಾಂತ ಬುಕ್ ಹೌಸ್‌ನಲ್ಲಿ ದೊರೆಯುತ್ತದೆ.

ಕೆಲವು ಉದಾಹಾರಣೆಗಳನ್ನು ಅವಗಾಹನೆಗೆ ನೋಡೋಣ $\frac{1}{19}$ $\frac{1}{29}$ $\frac{1}{89}$ ಈ ಭಿನ್ನರಾಶಿಗಳನ್ನು ದಶಮಾಂಶ ರೀತಿ ಬರೆಯಲು ಈಗಿನ ಪದ್ಧತಿಯಂತೆ ಒಂದೊಂದೇ ಮೆಟ್ಟಲಿನಲ್ಲಿ ಭಾಗಿಸುತ್ತಾ ಹೋಗಬೇಕು. $\frac{1}{19}$ ಭಾಗಿಸಲು 18 ಮೆಟ್ಟಲುಗಳಲ್ಲಿ ಬರೆಯಬೇಕಾಗುತ್ತೆ ನಂತರ ಭಾಗಲಬ್ಧ ಸಂಖ್ಯೆಗಳು ಪುನರಾವರ್ತನೆಯಾಗುತ್ತವೆ. ಆದರೆವೇದಸೂತ್ರ "ಏಕಾಧಿಕ ಪೂರ್ವೇಣ "ಸೂತ್ರದ ಪ್ರಕಾರ ಮಾನಸಿಕವಾಗಿಯೇ $\frac{1}{19}$ $\frac{1}{29}$ $\frac{1}{89}$ ಇವುಗಳನ್ನು ದಶಮಾಂಶ ರೀತಿಯಲ್ಲಿ ಒಂದೇ ಸಾಲಿನಲ್ಲಿಯೇ ಉತ್ತರ ಬರೆಯಬಹುದು. 5236/89997 ಈ ಭಿನ್ನರಾಶಿಯನ್ನೂ ಸಹ ದಶಮಾಂಶ ರೀತಿಯಲ್ಲಿ ಬರೆಯಲು ಭಾಗಿಸದೆ ಮನಸ್ಸಿನಲ್ಲಿಯೇ ವೇದ ಸೂತ್ರದ ಪ್ರಕಾರ ಉತ್ತರ ಬರೆಯ ಬಹುದು. (ಪುಟ 268).

"ನಿಖಿಲಂ" ಎಂಬ ವೇದ ಸೂತ್ರದ ಪ್ರಕಾರ 87965X99998 ಈ ಗುಣಾಕಾರ ಲೆಕ್ಕದ ಗುಣಲಬ್ಧವನ್ನೂ ಸಹ ಎರಡೇ ಸಾಲಿನಲ್ಲಿ ಕಂಡು ಹಿಡಿಯಬುಹುದು.

87965–12085
99998–     2
87963 /24070

ವಿವರಗಳಿಗೆ ಗ್ರಂಥವನ್ನು ಪರಿಶೀಲಿಸಬಹುದು.

ಮೇ - 1992

ಇದೇ ರೀತಿ ಸಾಮಾನ್ಯ ಸಮೀಕರಣ, ವರ್ಗಮೂಲ, ಘನಮೂಲ, ಜ್ಯಾಮಿತಿ
ತ್ರಿಕೋಣಮಿತಿ, ಬೀಜಗಣಿತ ಈ ಎಲ್ಲಾ ವಿಷಯಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು
ಕೇವಲ ವೇದ ಸೂತ್ರಗಳ ಸಹಾಯದಿಂದ ಸುಲಭವಾಗಿ ಬಿಡಿಸಿರುವುದನ್ನೂ ಸ
ಗ್ರಂಥವಲ್ಲಿ ನೋಡಬಹುದಾಗಿದೆ.

ಒಂದು ಬೀಜಗಣಿತದ ಸಮಸ್ಯೆಯನ್ನು ಸುಲಭವಾಗಿ ಬಿಡಿಸಿರುವುದನ್ನು ನೋಡೋಣ

$$\frac{x-a}{b+c} + \frac{x-b}{c+a} + \frac{x-c}{a+b} = \frac{x+a}{2a+b+c} + \frac{x+b}{2b+c+a} + \frac{x+c}{2c+a+}$$

ಈ ಸಮಸ್ಯೆಯನ್ನು ಬಿಡಿಸಲು ಈಗಿನ ಪದ್ಧತಿಯಂತೆ ಒಂದುಪುಟವಾದರೂ
ಬೇಕಾಗುತ್ತದೆ. ಆದರೆ ವೇದಸೂತ್ರವಾದ " **ಶೂನ್ಯ ಸಾಮ್ಯ ಸಮುಚ್ಚಯೇ**
ಯನ್ನು ಅನ್ವಯಿಸಿ ಒಂದೇ ಸಾಲಿನಲ್ಲಿ **ಉತ್ತರಿಸಬಹುದು. ಅದು** ಈ **ರೀತಿಯಿ**
$x - a - b = 0 \therefore x = (a+b+c)$ ಇಷ್ಟೇ.
ಇದಕ್ಕಿಂತಲೂ ಕ್ಲಿಷ್ಟಕರವಾದಸಮಸ್ಯೆಗಳನ್ನೂ ಸಹ ವೇದಸೂತ್ರಗಳ ಸಹಾಯದಿಂದ
ಬಿಡಿಸುವುದನ್ನುಗ್ರಂಥದಲ್ಲಿನೋಡಬಹುದಾಗಿದೆ.

ಪ್ರೊ|| ಡಿ. ಮಾರ್ಗನ್ ಎಂಬ ಪ್ರಸಿದ್ಧಪಾಶ್ಚಾತ್ಯಗಣಿತ ಶಾಸ್ತ್ರಜ್ಞರು
ಭಾರತೀಯರ ಗಣಿತಶಾಸ್ತ್ರವನ್ನು ಅಧ್ಯಯನ ಮಾಡಿ ಈ ರೀತಿ ಬರೆದಿದ್ದಾರೆ
Even the highest and farthest reaches of modern western mathematics have not yet brought the western world to the threshhold of Ancient Indian Mathematics
ಇದು ಅಕ್ಷರಶಃ ಸತ್ಯವಲ್ಲವೆ.



(ವಚನ ಕಾವ್ಯಾಮೃತಾಂಬುಧಿ)

—ಶ್ರೀ ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿ ಕಾಳಿದಾಸ" ಅಥಣಿ (ಬೆಳಗಾವಿ ಜಿಲ್ಲೆ)

## ದೇವಮಾನವ ಯೇಸುಕ್ರಿಸ್ತ-111

ವಿಶ್ವದಾ ನಶ್ವರದ ಬಾಳನ್ನು ಎತ್ತರಿಸಿ
ಶಾಶ್ವತವಹ ಅಮೃತತ್ವದೆಡೆಗೊಯ್ವ ಸಾಹಸಿ
'ಯೇಸೂಕ್ರಿಸ್ತನು'! ಧರ್ಮಜ್ಞ ||846||
ಭೂಮಿ ಮಾನವರ ನಿರ್ಜೀವ ವೃಕ್ಷಕ್ಕೆ
ಸ್ವಾಮಿ ಯೇಸೂಕ್ರಿಸ್ತ ಅಮೃತ ಜಲ ಸುರಿದು
ಸೋಮಕಳೆ ತಂದ! ಧರ್ಮಜ್ಞ ||847||

—(ಮೂಲ ಛಂದಸ್ಸಿನ ಮಹಾಕಾವ್ಯ)

"ಮಹಾತ್ಮನಾದ ಯೇಸುಕ್ರಿಸ್ತನನ್ನು ಶಿಲುಬೆಗೇರಿಸಿ,
ಆತನ ಕೋಮಲವಾದ ಎದೆಯ ಪಕ್ಕೆಯಲ್ಲಿ ಪಾಪಿಗಳು ಈಟಿಯಿಂದ
ತಿವಿದಾಗ, ರಕ್ತವೂ ನೀರೂ ಸುರಿಯುತ್ತಿತ್ತು ನೋಡಾ!
ಆ ಪಾಪಾತ್ಮರನ್ನು ಕುರಿತು ಯೇಸು; 'ನಿಮ್ಮೆಲ್ಲರನ್ನು ನಾನು ತಿಳಿದಿರುವೆ;
ನೀವು ನನ್ನನ್ನು ತಿಳಿಯಲಾರಿರಿ. ನೀವು ಏನು ಮಾಡುತ್ತೀರೆಂಬುದು
ನಿಮಗೆಗೊತ್ತಿಲ್ಲ. ಆದರೆ ನಾನು ನಿಮ್ಮಿಂದ ಎಂದೂ ಕೊಲ್ಲಲ್ಪಡುವುದಿಲ್ಲ-
ನಶ್ವರ ದೇಹವು ನಾಶವಾದೊಡು, ಆತ್ಮನು ಎಂದೆಂದಿಗೂ ಅಮೃತನು ನೋಡಾ!
ಹೇಗೆ ಭೂಮಿಯಲ್ಲಿ ಬಿತ್ತಿದ ಒಂದು ಗೋದಿಯ ಕಾಳು
ನೂರಾರು ಕಾಳುಗಳನ್ನು ಕೊಡುವಂತೆ, ಒಬ್ಬಯೇಸುವು ಈ
ದೇಹದಿಂದ ಅಳಿದರೆ, ನೂರಾರು ಜನಕ್ರಿಸ್ತರು ಈ ಭೂಮಿಯಲ್ಲಿ
ಮತ್ತೆ ಹುಟ್ಟಿ ಬರುತ್ತಾರೆಂದನು" ನೋಡಾ!
ಮತ್ತೆ ಹೀಗೆ ಪ್ರಾರ್ಥಿಸಿದ: "ದೇವಾ! ಇವರಿಗೆ ಒಳ್ಳೆಯ ಬುದ್ಧಿಯನ್ನು
ಜ್ಞಾನವನ್ನು ನೀಡು!" ಎಂದನು-ನೋಡಾ!
ಹಾಗೆಯೆ ಶಾಂತಹೃದಯನಾಗಿ, ದೇವರನ್ನು ಮೂರು ಬಾರಿ ಕೂಗಿ
ಕ್ರಿಸ್ತನು ಆತ್ಮ ಬಲಿದಾನ ಮಾಡಿದನು-ನೋಡಾ!
ಮೂರು ದಿನದ ಮೇಲೆ ಸಮಾಧಿಯಿಂದೆದ್ದು,
ಯೇಸುವು ತನ್ನ ಶಿಷ್ಯರಿಗೆ ಕಾಣಿಸಿಕೊಂಡನು,
ಕೇಳಾ, ಶ್ರೀ ಶೈಲಮಲ್ಲಿಕಾರ್ಜುನ."

## ಭಗವಂತನ "ಅಮರ ಆಕಾಶವಾಣಿ" -112

**ಅಮರ ಆಕಾಶವಾಣಿ:** "ಚತುರ್ದಶ ಲೋಕಂಗಳ ನೊಳಗೊಂಡು ದ್ವಾದಶಾದಿತ್ಯರು
ಸಂಚರಿಪ ಜ್ಯೋತಿರ್ಲೋಕದಾ ರಾಜತೇಜದೊಳು
ಪರಂಜ್ಯೋತಿಸ್ವರೂಪನಾಗಿ, ನಿರುಪಮ ನಿರಂಜನನಾಗಿ
ಅನಾದ್ಯನಂತನಾಗಿಬೆಳಗುತಿಪ್ಪಾ ನಮ್ಮ ಮಹಾದೇವನಾ,
ಬೃಹತ್ ಬ್ರಹ್ಮಾಂಡದಾಕಾಶವಾಣಿ ಪ್ರಸಾರಗೆಯ್ವ ಶಿವಭಕ್ತಿಸಾರ
ಗೀತಂಗಳನು (ಅಶರೀರವಾಣಿ)ನೀವು ಕೇಳಿದಿರೇನಯ್ಯಾ?
ಕೇಳದಿರ್ದಡೆ ನೀವು ಭಕ್ತಿದಳೆದು ಕೇಳಿರಯ್ಯಾ!
ಅಮೃತಗೀತ ರಸಪಾನಗೆಯ್ದು ಅಮರರಾಗಿರಯ್ಯ
ಶ್ರೀಶೈಲ ಮಲ್ಲಿಕಾಜುನ"

**ಅಮರ ಆಕಾಶವಾಣಿಯ: ಕಲಾವಿದರು --113**

"ಭಗವದಾಕಾಶವಾಣಿಯ ಕಲಾವಿದರೆಲ್ಲ,
ಎಂತಹರೆಂದಡೆ:
ಭಗವದ್ಭಕ್ತ ಶಿರೋಮಣಿಗಳೆ ಕಾಣಿರಯ್ಯಾ
ಈ ಭಕ್ತಿಗಾನ ಕಲಾವಿದರ ನಿತ್ಯ ಆತ್ಮ ಪರಮಾತ್ಮಾನುಭವ
ಗೀತಂಗಳನೆ ಹರುಷಾಬ್ಧಿಯೊಳು ಕೇಲಿ ನಿಂದು
ಹಾಡುತಿಪ್ಪರು ನೋಡಿರಯ್ಯಾ!
ಇಂತು ಮಹಿಮಾನ್ವಿತರಿವರೇ ಸ್ವರ್ಗ-ಮರ್ತ್ಯ-ಪಾತಾಳ
ಮೂಲೋಕಕ್ಕೂ ಗಾನಗಂಗೆಯ ಹರಿಸಿ, ರಹಸ್ಯದೊಳ್
ಹರ್ಷಿಪಂತೆ ಮಾಡುತಿಪ್ಪರು ನೋಡಿರಯ್ಯಾ!
ಇದ ಮರ್ತ್ಯದ ಮಾನವರೆತ್ತ ಬಲ್ಲರು?
ಹೇಳಾ ಶ್ರೀಶೈಲ ಮಲ್ಲಿಕಾರ್ಜುನ"

**ಅಮರ ಆಕಾಶವಾಣಿಯ: ಸೇವಕರು-ದೇವತೆಗಳು- 114**

"ಭುವನ ಭಾಗ್ಯ ವಿಶೇಷದಿಂದ ಭೂಮಿಯೊಳು ಹುಟ್ಟಿ ಬಂದಿರ್ದ,
ಭಕ್ತ ಕವಿ ಕಲಾಕಾರ ಗಣಂಗಳೆ ನಿತ್ಯಕೈಲಾಸಕೈತಂದು,
"ಅಮರ ಆಕಾಶವಾಣಿ" ಯೊಳು ನಿಂದು, ಭಕ್ತಿಸುಮಧುರ
ಗೀತಂಗಳಂ ಪಾಡಿ ನಲಿಯುತಿಹರು ನೋಡಿರಯ್ಯಾ!
ಈ ಅಮರ ಆಕಾಶವಾಣಿಯೊಳು ದೇವತೆಗಳೇ ಸೇವಕರಾಗಿ
ಬಾನುಲಿ ಪ್ರಸಾರ ಮಾಳ್ಪರು ನೋಡಿರಯ್ಯಾ!
ನಮ್ಮ "ಸದ್ಭಕ್ತಿಗೀತಂ" ಗಳನೆ ಈ ದೇವತೆಗಳು
ಆನಂದದಿಂದ ಪ್ರಚುರಗೊಳಿಸುವರು ಕೇಳಿರಯ್ಯಾ!
ನಮ್ಮೀ ಅಮೃತಗೀತಗಂಗಾವಾಹಿನಿ ಲೋಕಪಾವನಗೊಳಿಸಿಹಳು!
ಕೇಳಾ, ಶ್ರೀಶೈಲಮಲ್ಲಿಕಾರ್ಜುನ!"

**ಅಮರ ಆಕಾಶವಾಣಿತತ್ವ : –115**

"ಒಮ್ಮೊಮ್ಮೆ ಆಮರಆಕಾಶವಾಣಿ ಸೇವಕರೆನೆ
ದೇವತೆಗಳೆ ಪ್ರಥ್ವಿಗಿಳಿದು ಬಂದು ಶರಣವಾಣಿ ಗೀತಂಗಳನು,
'ಟೇಪ್‌ರಿಕಾರ್ಡ' ಮಾಡಿಕೊಂಡು ಹೋಗಿ,
ಅಲ್ಲಿಂದ ಪ್ರಸಾರ ಮಾಡುತಿಪ್ಪರು ನೋಡಿರಯ್ಯಾ !
ಭಗವಂತನ "ಅಮರ ಅಕಾಶವಾಣಿ" ಯ ಶಬ್ದ ತರಂಗಗಳಾ
ಗ್ರಹಣಶಕ್ತಿ ಮತ್ತು, ಆಕರ್ಷಣಶಕ್ತಿ,
ಧರೆಯ ಆಕಾಶವಾಣಿಗಳೊಳಗಿಲ್ಲವಯ್ಯಾ !
ಭಗವಂತನಾಭಕ್ತಿ "ಅಮರ ಆಕಾಶವಾಣಿ" ಯು
ಅನಂತ ಅಪಾರ ಶಕ್ತಿ ಸಾಂದ್ರವಾಗಿರ್ದಡು
ಮರ್ತ್ಯದ ಭಕ್ತಿಹೀನ 'ಆಕಾಶವಾಣಿ' ಯ
ಶಬ್ದ ಸ್ವೀಕರಿಸದು ನೋಡಿರಯ್ಯಾ !
ಏಕೆಂದಡೆ: ಅಲ್ಲಿ ಆತ್ಮಾರಾಮನೇ ಇಲ್ಲದಿರುವುದರಿಂದ
ಪರಮಾತ್ಮಾವತರಣ ಶಕ್ತಿ ಅದನ್ನು
ಸ್ವೀಕರಿಸದಾಯಿತ್ತು ನೋಡಿರಯ್ಯಾ !
ಇಂತೀ ಪರತತ್ವವನ್ನೊಳಗೊಂಡ ಭಗವಂತನಾ "ಅಮರಆಕಾಶವಾಣಿ' ಗೂ
ಭಕ್ತಿಯನುಳಿದಿಳೆಯ "ಆತ್ಮರಹಿತ ಆಕಾಶವಾಣಿ' ಗೂ
ಸಂಬಂಧವಿಲ್ಲದಾಯಿತ್ತು ! ಕೇಳಾ. ಶ್ರೀ ಶ್ವೈಲಮಲ್ಲಿಕಾರ್ಜುನ !

**ಪರಮಾತ್ಮತತ್ವ ಹಾಗೂ ಆಕಾಶತತ್ವ —116**

ಭಕ್ತಿಭರಿತ ಭಕ್ತನಗೀತ "ಮಾತ್ರವಲ್ಲದೇ ಅವನಾಡುವ ನುಡಿ
ಶಬ್ದದಾ ಸಹಸ್ರತರಂಗದೊಂದು ಬಿಂದು ಕಿರಣಸಹ,
ಈಬ್ರಹ್ಮಾಂಡಾಂತರ್ಗತವಾದ ಆಕಾಶದಿಂದ ಹೊರಗೆಲ್ಲಿಯೂ
ಹೋಗದೆ ಒಳಗಿಪ್ಪುದು ನೋಡಿರಯ್ಯಾ !
ಶಿವಭಕ್ತನ ಒಂದೊಂದು ಉಸುರಿನ ಕಣದ ಕಿರಣಗಳೂ ಕೂಡ,
ಭಗವಂತನ ಹೃದಯಕ್ಕೆ ತಾಗಿ, ಕರುಣೆಯ ಹೊಳೆಯನ್ನೇ
ಇಳೆಗೆ ಹರಿಸಬಹುದು ನೋಡಿರಯ್ಯಾ !
ಅಂತೆಯೇ ಭಕ್ತಿ ಭಂಡಾರಿ ಬಸವಣ್ಣ ಪರಶಿವನ "ಕೈಲಾಸ" ವನೆ
ಧರೆಗಿಳಿಸಿ ತಂದ ನೋಡಿರಯ್ಯಾ !
ಶಿವಭಕ್ತಿಯ ಬಲದಿಂದ ಬ್ರಹ್ಮಾಂಡವನು ಬೆಳಗುವುದಲ್ಲದೆ,
ಹೊಸದೊಂದು ಬ್ರಹ್ಮಾಂಡವನೆ ನಿರ್ಮಿಸುವ ಶಕ್ತಿ,
ಭಕ್ತಿಯೊಳಡಗಿಹುದು ಕಾಣಿರಯ್ಯಾ !
ಪರಶಿವನಲ್ಲಿ ಶಕ್ತಿ ಅವಿನಾ ಭಾವದಿಂದಿರುವಂತೆ,
ಸದ್ಭಕ್ತನಲ್ಲಿ ಶಕ್ತಿಯೆ ಭಕ್ತಿರೂಪದಲ್ಲ ಬೆರೆತು,
ಆ ಭಕ್ತಿರೂಪದ ಶಕ್ತಿಯೆ ಶಿವನಲ್ಲಿ ಕಲೆತು, ಶಿವಪದನ್ನೈದುವುದು !
ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ !"

# ಪೂರ್ವಾಗ್ರಹ

ಜೆ. ಶಾರದಾ ರಾಜಶೇಖರ್, 847, 4ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-40.

ಪೂರ್ವಾಗ್ರಹ ಪ್ರತಿಯೊಬ್ಬ ವ್ಯಕ್ತಿಯನ್ನು ಕಾಡುತ್ತಿದೆ ಎಂದರೆ ಉತ್ಪ್ರೇಕ್ಷೆ ಮಾತಲ್ಲ. ಒಬ್ಬ ವ್ಯಕ್ತಿಯ ವಿಷಯದಲ್ಲಾಗಲಿ ಒಂದು ಜನಾಂಗದ ವಿಷಯದಲ್ಲಾಗಲಿ ಸಮಗ್ರವಾಗಿ ಪರಿಶೀಲಿಸದೆಯೇ ಕೆಲವು ಅಭಿಪ್ರಾಯಗಳನ್ನು ಬೆಳೆಸಿಕೊಂಡಿರುತ್ತೇವೆ. ಕೆಲವರ ವಿಷಯದಲ್ಲಿ ನಾವು ನಿಷ್ಕಾರಣವಾಗಿ ದುರಭಿಪ್ರಾಯಗಳನ್ನು ಬೆಳೆಸಿಕೊಂಡು ಅವರಒಡನಾಟ ಹೆಚ್ಚಾಗಿ ಅವರನಿಜವಾದ ರೂಪವನ್ನು ತಿಳಿದುಕೊಂಡ ಮೇಲೆ ನಮ್ಮ ದುಡುಕು ಬುದ್ಧಿಗೆ ನಾವೇ ಅನೇಕ ವೇಳೆ ನಾಚುತ್ತೇವೆ. ಹಾಗೆಯೇ ಆತುರ ಪಟ್ಟು ಕೆಲವರ ವಿಷಯದಲ್ಲಿ ಒಳ್ಳೆಯ ಅಭಿಪ್ರಾಯಗಳನ್ನು ಬೆಳೆಸಿಕೊಂಡಿರುತ್ತೇವೆ. ನಿಜವನ್ನು ಅರಿತಮೇಲೆ ಪಶ್ಚಾತ್ತಾಪ ಪಡುವುದೂ ಉಂಟು. ಇಂತಹ ಪೂರ್ವ ನಿರ್ಣಯಗಳು ಆ ವ್ಯಕ್ತಿಗಳ ಪರವಾಗಿದ್ದಲ್ಲಿ ಅವುಗಳನ್ನು ಪಕ್ಷಪಾತಗಳೆನ್ನುತ್ತೇವೆ. ಅವರಿಗೆ ವಿರೋಧ ಆಗಿದ್ದಲ್ಲಿ ಅವುಗಳನ್ನು ಪೂರ್ವಗ್ರಹಗಳೆನ್ನುತ್ತೇವೆ.

ಮಾನವ ಸಮುದಾಯಗಳ ಪರಸ್ಪರ ಸಂಬಂಧದಲ್ಲಿ ಪಕ್ಷಪಾತಕ್ಕಿಂತ ಪೂರ್ವಾ-ಗ್ರಹದ ಪ್ರಭಾವವೇ ಹೆಚ್ಚಾಗಿ ಕಾಣುವುದರಿಂದ ಸಮಾಜ ವಿಜ್ಞಾನಿಗಳು ಪೂರ್ವಾಗ್ರಹ ಗಳನ್ನೇ ಹೆಚ್ಚಾಗಿಸಂಶೋಧನೆ ಮಾಡಿದ್ದಾರೆ. ಪೂರ್ವಾಗ್ರಹವನ್ನು ಪ್ರತಿಕೂಲದ ಮನಃ ಪ್ರವೃತ್ತಿಎಂದೇ ಸಮಾಜ ವಿಜ್ಞಾನಿಗಳು ವ್ಯಾಖ್ಯಾನಮಾಡುತ್ತಾರೆ. ಮಾನವ ಸಮಾಜವು ಜಾತಿ, ಮತ, ವರ್ಣ, ಜನಾಂಗ, ಭಾಷೆ, ಪ್ರಾಂತ, ಸಂಸ್ಕೃತಿ, ಮೊದಲಾದ ಕಾರಣ-ಗಳಿಂದ ಅನೇಕ ವಿಧವಾಗಿ ಒಡೆದು ಸಣ್ಣ ಸಣ್ಣ ಸಮುದಾಯಗಳಾಗಿ ವಿಭಜಿತವಾಗಿದೆ. ಒಂದು ಸಮುದಾಯಕ್ಕೆ ಸೇರಿದ ಜನರು ಇನ್ನೊಂದು ಗುಂಪಿಗೆ ಸೇರಿದ ಜನರನ್ನು ದ್ವೇಷಿಸುವುದೂ ಅವರ ವಿಷಯದಲ್ಲಿ ಪೂರ್ವಗ್ರಹಗಳನ್ನು ಬೆಳೆಸಿಕೊಳ್ಳುವುದು ಎಲ್ಲರ ಅನುಭವಕ್ಕೆ ಬಂದಿರುವ ವಿಷಯವೇ ಆಗಿದೆ.

ಈಚೆಗೆ ಪೂರ್ವಾಗ್ರಹಗಳು ಸಮಾಜವಾದಿ-ಬಂಡವಾಳಷಾಹಿಗಳ ವಿವಿಧಭಾಷಾ ಸಮುದಾಯಗಳ ಜನಾಂಗಗಳಮತ್ತು ಸಣ್ಣ ಸಣ್ಣ ಕುಲ,ವರ್ಣಗಳ ನಡುವೆಯೂ ಹುಟ್ಟಿ ಕೊಂಡು ಸಮುದಾಯಗಳ ಘರ್ಷಣೆಗೆ ಕಾರಣವಾಗಿದೆ.

ಪೂರ್ವಾಗ್ರಹಗಳು ಜನರಲ್ಲಿ ಆಳವಾಗಿ ಬೇರೂರಿರುತ್ತವೆ, ಇವುಗಳನ್ನು ಹೋಗ ಲಾಡಿಸುವುದು ಬಹಳ ಕಷ್ಟ. ಯಾರಾದರೂ ನಮ್ಮಿಂದ ತೊಡೆದು ಹಾಕಲು ಪ್ರಯತ್ನ ಮಾಡಿದರೆ ಆ ಪ್ರಯತ್ನವನ್ನು ನಾವು ಪ್ರತಿಭಟಿಸುತ್ತೇವೆ, ಅಷ್ಟೇ ಅಲ್ಲ ನಮ್ಮ ಸ್ವಂತ ಅನುಭಗಳನ್ನೋ ಇತರರ ಅನುಭವಗಳನ್ನೋ ಉದಾಹರಿಸಿ ನಮ್ಮ ವರ್ತನೆಯನ್ನು ಸಮರ್ಥನೆ ಮಾಡಿಕೊಳ್ಳುತ್ತೇವೆ, ನಮ್ಮ ಪೂರ್ವಾಗ್ರಹಗಳಿಗೆ ವಿರೋಧವಾದ

ಪ್ರಮಾಣಗಳನ್ನೋ ಅಥವಾ ಅನುಭವಗಳನ್ನೋ ಇತರರು ತೋರಿಸಿದರೆ ಅದನ್ನು ಯಾವುದೇ ಒಂದು ಕಾರಣವನ್ನು ಕೊಟ್ಟು ಅಲಕ್ಷ್ಯ ಮಾಡುತ್ತೇವೆ.

ಹೀಗೆ ಪೂರ್ವಾಗ್ರಹವು ಇತರ ಸಮುದಾಯಗಳ ಅಥವಾ ವ್ಯಕ್ತಿಗಳ ಬಗ್ಗೆ ಪ್ರತಿಕೂಲವಾದ ಮನಃ ಪ್ರವೃತ್ತಿ, ಅದನ್ನು ಬೆಳೆಸಿಕೊಂಡಿರುವ ವ್ಯಕ್ತಿಗಳು ಆ ಸಮುದಾಯವನ್ನು, ಅದರ ವ್ಯಕ್ತಿಗಳನ್ನು ಕಂಡಾಗ ಅಥವಾ ನೆನಪು ಮಾಡಿಕೊಂಡಾಗ ಅದರ ಅಥವಾ ಅದರ ಬಗ್ಗೆ ಪ್ರತಿಕೂಲವಾದ ಭಾವನೆಗಳನ್ನು ಅನುಭವಿಸುತ್ತಾರೆ. ಪ್ರತಿವ್ಯಕ್ತಿಯಲ್ಲೂ ಗುಣದೋಷಗಳೆರಡನ್ನೂ ಕಾಣಬಹುದು. ಹೀಗಿರುವಾಗ ಇಡೀಸಮುದಾಯದ ಜನರಿಗೆ ಕೆಲವು ದುರ್ಗುಣಗಳನ್ನು ಹೊರಿಸಿ ಅವನ್ನು ಸೂಚಿಸುವ ಸ್ಟೀರಿಯೋಟೈಪುಗಳನ್ನು ಬಳಸುವುದು ತಾರ್ಕಿಕವಾಗಿ ಮತ್ತು ಸತ್ಯದ ದೃಷ್ಟಿಯಿಂದ ಸಮಂಜಸವಲ್ಲ.

ಪೂರ್ವಾಗ್ರಹಗಳು ಹುಟ್ಟುಗುಣಗಳಲ್ಲ ಕಲಿತವು ಮಕ್ಕಳು ಮನೆಯಲ್ಲಿ ಮತ್ತು ಹೊರಗಡೆ ಇತರರ ನಡೆ ನುಡಿಗಳಿಂದ ಬೇರೆ ಬೇರೆ ಸಮುದಾಯಗಳಿಗೆ ಸೇರಿದ ಜನರ ಬಗ್ಗೆ ಹೇಗೆ ನಡೆದುಕೊಳ್ಳಬೇಕೆಂದಬುನ್ನು ಕಲಿಯುತ್ತಾರೆ, ಅದರ ಬಗ್ಗೆ ತಮ್ಮ ಗುಂಪಿನ ಜನರು ಉಪಯೋಗಿಸುವ ಆರೋಪಿತ ನಾಮಗಳನ್ನು ಕಲಿತು ತಾವು ಉಪಯೋಗಿಸುತ್ತಾರೆ. ತಂದೆ ತಾಯಿಗಳು, ಇತರರು ಮಕ್ಕಳಮುಂದೆ ಮಾತನಾಡುವಾಗ ಪೂರ್ವಾಗ್ರಹ ಪೀಡಿತ ಭಾಷೆಯನ್ನು ಬಳಸದಿರುವುದು ಒಳಿತು, ಪೂರ್ವಾಗ್ರಹದ ಮಾತುಗಳು ಒಬ್ಬರಿಂದೊಬ್ಬರಿಗೆ ಹರಡಿ ಕಡೆಗೆ ಎಲ್ಲರಲ್ಲೂ ಇವು ಸತ್ಯವಾದುವೆಂಬ ಭ್ರಮೆಯನ್ನುಂಟು ಮಾಡುತ್ತವೆ.

---

## ಮಾನಸಿಕ ಶಕ್ತಿಗಳು - (ಪ್ರಾಣಾಯಾಮ)

ಶ್ರೀ ದೇವೇಂದ್ರಪ್ಪ ಮಹಾದೇವಪ್ಪ ಬಡಿಗೇರ (ನಿ॥ ಶಿಕ್ಷಕರು) ಗೋಕುಲ (ಹುಬ್ಬಳ್ಳಿ)

1) ಶ್ವಸನ, 2) ಧಾರಣ, 3) ನಿಶ್ವಸನ.

ಪ್ರಾಣಾಯಾಮ ಹೊಸದಾಗಿ ಅಭ್ಯಾಸ ಮಾಡುವವರು. ಮೊದಮೊದಲು ಧಾರಣ ಕ್ರಿಯೆಯನ್ನು ಬಿಡಬಹುದು ಬಿಟ್ಟು ಧಾರಣಕ್ರಿಯೆಯನ್ನು ಮಾಡುವಾಗ ಯಾವುದೇ ತರಹದ ಅಸ್ವಸ್ಥತೆ ಇರಬಾರದು. ಅಥವಾ ಉಸುರು ಗಟ್ಟುವಿಕೆಯ ಅನುಭವವಾಗ ಬಾರದು. ಈ ಪ್ರಾಣಾಯಾಮದಅಭ್ಯಾಸವನ್ನು ದಿನದಲ್ಲಿನಾಲ್ಕುಸಲ ಮಾಡಬಹುದು.

1) ಮುಂಜಾವಿನಲ್ಲಿ, 2) ನಡುಮಧ್ಯಾಹ್ನದಲ್ಲಿ, 3) ಸಂಜೆಯಲ್ಲಿ 4) ಮಧ್ಯರಾತ್ರಿಗೆ ಪ್ರಾರಂಭದಲ್ಲಿ ಮುಂಜಾನೆ ಮತ್ತು ಸಂಜೆಗೆ ಎರಡುಸಲ ಅಭ್ಯಾಸ ಮಾಡಿದರೆ ಸಾಕು. ಅಲ್ಪಾಹಾರ ಅಥವ ಬರಿಹೊಟ್ಟೆ ಪ್ರಾಣಾಯಾಮದ ಅಭ್ಯಾಸಕ್ಕೆ ಅತ್ಯವಶ್ಯಕವಾಗಿದೆ. ಹೊಸಬರು ಇಪ್ಪತ್ತುಸಲ ಪ್ರಾಣಾಯಾಮ ಅಭ್ಯಾಸವನ್ನು ಮಾಡಬೇಕು. ಈ ಪ್ರಾಣಾಯಾಮವು ನಮ್ಮಲ್ಲಿರುವ ಆಧ್ಯಾತ್ಮಿಕ ಶಕ್ತಿಯನ್ನು ಜಾಗ್ರತಗೊಳಿಸುತ್ತದೆ. ಇದು ಪುಪ್ಪಸಗಳ ಒಂದು ವ್ಯಾಯಾಮ ಪದ್ಧತಿ. ತೀರಾ ಹೆಚ್ಚುಸಲು ಪ್ರಾಣಾಯಾಮದ ಅಭ್ಯಾಸವು ಅಪಾಯಕರವಾಗಿದೆ. 20 ಸಲ ಪ್ರಾಣಾಯಾಮ ಮಾಡಿದಾಗ ಸಾಧಕನಿಗೆ ಅದರಲ್ಲಿಯ ಲಕ್ಷ್ಯವು ಹಾರಿಹೋಗುತ್ತದೆ. ಆದ್ದರಿಂದ 2 ಅಥವಾ 3 ನಿಮಿಷಗಳವರೆಗೆ ಇದನ್ನು ಮಾಡಬೇಕು. ಕ್ರಮೇಣವಾಗಿ ಒಂದೆರೆಡು ನಿಮಿಷಗಳವರೆಗೆ ಅವಧಿಯನ್ನು ಬೆಳೆಸಬಹುದು. ದಣಿವಿಕೆ ಅನಿಸಿದರೆ ಕೂಡಲೇ ಪ್ರಾಣಾಯಾಮದ ಅಭ್ಯಾಸವನ್ನು ನಿಲ್ಲಿಸಬೇಕು. ಉಸಿರನ್ನು ಒಳಗೆ ತೆಗೆದುಕೊಳ್ಳುವಾಗ ನಿಧಾನವಾಗಿಯೂ ಗಾಢವಾಗಿಯೂ ಉಸಿರನ್ನು ಎಳೆಯಬೇಕು. ಪ್ರಾರಂಭದಲ್ಲಿ ತೀರಾ ಗಾಢವಾಗಿ ಎಳೆಯುವ ಪ್ರಯತ್ನ ಮಾಡಬಾರದು. ಒಳ್ಳೇ ಜೋರಿನ ಶ್ವಸನ ಕ್ರಿಯೆಯಿಂದ ಪುಪ್ಪಸಗಳು ಮೃದುವಾಗಿಯೂ ಗಾಸಿಯಾಗಿಯೂ ಹೋಗುತ್ತವೆ. ಉಸಿರನ್ನು ಹೊರಗೆ ಬಿಡುವಾಗಲೂ ಸಾವಕಾಶವಾಗಿ ಬಿಡಬೇಕು. ಒಂದು ದಿನಕ್ಕೆ ಅನೇಕ ಸಲ ಕೆಲವೇ ನಿಮಿಷಗಳವರೆಗೆ ಅಭ್ಯಾಸ ಮಾಡಿ ನಂತರ ಕ್ರಮೇಣ ದೀರ್ಘಕಾಲದವರೆಗೆ ಪ್ರಾಣಾಯಾಮವನ್ನು ಸಾಧಿಸಬೇಕು.

### ಪ್ರಾಣಾಯಾಮದ ವೇಳೆಗೆ ತಕ್ಕ ನಿಲುವು

ಸ್ವಾಮಿ ವಿವೇಕಾನಂದರು ಈ ಕೆಳಗಿನ ಭಂಗಿಯನ್ನು ಮನ್ನಿಸಿದ್ದಾರೆ.

**ಕ್ರಮಸಂಖ್ಯೆ-೧** ನೀಟಾಗಿ ಕುಳಿತುಕೊಳ್ಳಬೇಕು ದೇಹವನ್ನು ನೀಟಾಗಿ ಇರಿಸಬೇಕು. ಕೇಶರು ರೌಜ್ಜುವು ಬೆನ್ನುಮಣಿಗಳ ಒಳಭಾಗದಲ್ಲಿ ಇದ್ದರೂ ಕೂಡಾ ಅದಕ್ಕೆ ಹೊಂದಿಕೊಂಡಲ್ಲಿ ನೀವು ಬೆನ್ನು ಮಣಿಸಿ ಕೂತರೆ ಕೇಶರು ರೌಜ್ಜುವಿಗೆ ತೊಂದರೆ

ಕೊಡುತ್ತೀರಿ ನೀಟಾಗಿ ಕುಳಿತರೆ ಈ ರಜ್ಜುವು ಸ್ವಸ್ಥವಾಗಿರುವುದು. ದೇಹದ ಮೂರು ಭಾಗಗಳೆಂದರೆ ಎದೆ, ಕುತ್ತಿಗೆ, ತಲೆ, ಇವುಗಳು ಒಂದೇ ಸರಳರೇಖೆಯಲ್ಲಿ ಇರಬೇಕು. ಸುಖಾಸನದಭಂಗಿಯೂ ಬಹಳ ಅನುಕೂಲವೆಂದು ತಿಳಿಯಲಾಗಿದೆ. ಅದು ಸುಲಭವೂ ಹೌದು. ದೇಹವು ಚಂಚಲವಾಗಿದ್ದರೆ ಮನಸ್ಸು ಕೂಡ ಚಂಚಲವಾಗುವುದು. ದೇಹ ಮನಸ್ಸುಗಳಲ್ಲಿ ಅಷ್ಟೊಂದು ಘನಿಷ್ಟ ಸಂಬಂಧವಿದೆ. ಸುಖಾಸನವೆಂದರೆ ಊಟಕ್ಕೆ ಕುಳಿತಿರುವಾಗಿನ ಭಂಗಿ ಒಂದು ಚಾಪೆಯ ಮೇಲಾಗಲಿ ಅಥವಾ ಹಾಸಿಗೆಯ ಮೇಲಾಗಲಿ ಕೂಡ್ರುವುದು ಒಳ್ಳೆ ಭಂಗಿ ಎನಿಸಿದೆ. ಮುಖವನ್ನು ಎದೆಯನ್ನು ಮೇಲೆ ಮಾಡಿ ಕೈಕಾಲುಗಳನ್ನು ದೇಹದ ಜೊತೆಗೆ ನೀಟಾಗಿ ಚಾಚಿ ಮಲಗಬೇಕು. ಉಸಿರನ್ನು ಒಳಗೆ ಎಳೆಯುವಾಗ ಗದ್ದವನ್ನು ಎದೆಯಕಡೆಗೆ ಬಾಗಿಸಬೇಕು. ಯಾವುದೇ ವತ್ಯಯ ಇಲ್ಲದ ಒಳ್ಳೇಗಾಳಿ ಬೀಸುವ ಮಲಗುವ ಕೋಣೆಯು ಈ ಅಭ್ಯಾಸಕ್ಕೆ ಯೋಗ್ಯಸ್ಥಾನ ಈ ಅನುಕೂಲತೆ ಇಲ್ಲದಿದ್ದರೆ ಮನೆಯ ಹೊರಗೆ ಶಾಂತವಾದ ಸ್ಥಳವೊಂದನ್ನು ಆರಿಸಿ ಕೊಳ್ಳಬೇಕು. ಮುಂಜಾನೆ ನಿತ್ಯದ ಆಹ್ನಿಕಗಳ ನಂತರ ಪ್ರಾಣಾಯಾಮದ ಅಭ್ಯಾಸ ವನ್ನು ಮಾಡಬೇಕು, ಆ ವೇಳೆಗೆ ಹೊಟ್ಟೆಖಾಲಿ ಇದ್ದಷ್ಟು ಒಳ್ಳೆಯದು. ಅಭ್ಯಾಸ ಮಾಡುವವರು ಕಣ್ಣು ಮುಚ್ಚಬೇಕು- ನಿಮ್ಮಚಿತ್ತವನ್ನು ದೇಹದ ಹೊರಗೂ ಒಳಗೂ ಸರ್ವಾಂಗಣವಾಗಿ ಹರಿಸಬೇಕು. ಈ ಪ್ರಕಾರವಾಗಿನಿರಂತರವಾದ ಚಿತ್ತಸ್ಥೈರ್ಯವನ್ನು ಸಾಧಿಸುವಾಗ ನಿಮ್ಮ ದೇಹದ ತುಂಬೆಲ್ಲ ಒಂದು ಪ್ರಕಾರದ ಸುಖದ ಸಂಚಾರವು ಅನುಭವಕ್ಕೆ ಬರುವುದು. ಒಂದು ಬಗೆಯ ಸುಖಕರ ತರಂಗಗಳು ನಿಮ್ಮ ದೇಹದಲ್ಲಿ ಹರಿದು ದೇಹದ ಎಲ್ಲ ಕ್ರಿಯೆಗಳನ್ನು ಬಲಗೊಳಿಸುತ್ತವೆ. ನೀವು ಯಾವ ಯಾವ ಭಾಗಕ್ಕೆ ಚಿತ್ತವನ್ನು ಹರಿಸುತ್ತಿರೋ ಆ ಭಾಗಕ್ಕೆ ಹೆಚ್ಚು ಹೆಚ್ಚು ರಕ್ತಸಂಚಾರ-ವಾಗುತ್ತದೆ. ಈ ಬಗೆಯ ಚಿತ್ತಾಸ್ಥಿರತೆ ಮೊದಮೊದಲು ಐದು ನಿಮಿಷಗಳ ಅಭ್ಯಾಸದ ನಂತರ ದೇಹದಲ್ಲಿ ಸುಖಸಂಚಾರವನ್ನು ಅನುಭವಿಸಬಹುದು. ಇದು ಪ್ರಾಣಾಯಾಮದ ಮೊದಲ ಹಂತ.

**ಕ್ರಮಸಂಖ್ಯೆ-೨** ಒಳಗೆ ಉಸಿರನ್ನು ಎಳೆದುಕೊಳುತ್ತ ಎದೆಯನ್ನು ಭೂಪಾತಳೆಯಲ್ಲಿ ಹಿಗ್ಗಿಸಿರಿ ನಿಧಾನವಾಗಿ ಗಾಳಿಯನ್ನು ಎಳೆದುಕೊಳ್ಳಿರಿ. ಉಸಿರು ಎಳೆಯುವಾಗ ನೀವು ಹೊರಗಿನ ವಿಶ್ವದ ಕಾಂತ ಶಕ್ತಿಯನ್ನು ಉಸುರಿನ ಮುಖಾಂತರ ಅರಗಿಸಿಕೊಳ್ಳುತ್ತಿದ್ದೀರಿ ಎಂದು ಕಲ್ಪಿಸಿಕೊಳ್ಳಿರಿ. ಉಸಿರು ಎಳೆದುಕೊಳ್ಳಲುಬೇಕಾದ ಸಮಯದ ಎರಡು ಪಟ್ಟು ಸಮಯದವರೆಗೆ ಉಸಿರನ್ನು ನಿಮ್ಮ ಪುಪ್ಪಸಗಳಲ್ಲಿ ತಡೆದು ನಿಲ್ಲಿಸಿರಿ. ಹಾಗೆ ತಡೆದು ನಿಲ್ಲಿಸುವಾಗ ನೀವು ಕಾಂತತ್ವವನ್ನು ಅರಗಿಸಿಕೊಳ್ಳುತ್ತಿದ್ದೀರಿ ಎಂದು ಭಾವಿಸಿರಿ, ನಂತರ ಉಸಿರನ್ನು ನಿಧಾನವಾಗಿ ಹೊರ ಚೆಲ್ಲುವಾಗ ಹವೆಯಲ್ಲಿಯ ಕಾಂತಶಕ್ತಿಯನ್ನು ಅರಗಿಸಿಕೊಂಡ ಬಳಿಕ ಅದನ್ನು ಹೊರಚಲ್ಲುತ್ತಿದ್ದೀರಿ ಎಂದು ಭಾವಿಸಿಕೊಳ್ಳಿ. ನಿಮ್ಮ ಮೆದುಳು ಮತ್ತು ಚಿತ್ತ ಇವುಗಳು ನೀವು ಕೈ ಕೊಂಡಿರುವ

ಕೆಲಸದಲ್ಲಿಯೇ ಪೂರ್ಣವಾಗಿ ಮಗ್ನವಾಗಿರಲಿ. ಈ ಸೂಚನೆಗಳನ್ನು ಅನುಸರಿಸುತ್ತ ಮುಂಜಾನೆ ಮೂರು ನಿಮಿಷ ಮತ್ತು ಸಂಜೆ ಮೂರು ನಿಮಿಷಗಳವರೆಗೆ ಅಭ್ಯಾಸ ಮಾಡುವ ಕ್ರಮವು. ಈ ಅವಧಿಯನ್ನು ಹತ್ತು ನಿಮಿಷಗಳವರೆಗೆ ಬೆಳೆಯಿಸಿರಿ. ಆಗ ನಿಮಗೆ ಈ ಅಭ್ಯಾಸದ ಪರಿಣಾಮವು ಗೋಚರವಾಗುವುದು. ಈ ಹಂತದಲ್ಲಿ ನಿಮ್ಮಲ್ಲಿರುವ ಶಾಂತ ಶಕ್ತಿಯುಹೆಚ್ಚಿ ನಿಮ್ಮದೇಹಕ್ಕೆ ಒಂದು ವಿಲಕ್ಷಣವಾದ ಆನಂದದ ಅನುಭವವವು ಉಂಟಾಗುವುದು ಇಂತಹ ಅನುಭವವಾದೊಡನೆ ಪ್ರಾಣಾಯಾಮವನ್ನು ನಿಲ್ಲಿಸಿರಿ. ನಿಮ್ಮದೇಹದಲ್ಲಿ ಮಂದವಾದತರಂಗಗಳು ಹರಿಯುವುದನ್ನು ಅನುಭವಿಸುತ್ತೀರಿ ಈ ಪ್ರಕಾರ ಸರ್ವಾಂಗದಲ್ಲಿ ಸಂಚಯದ ಅನುಭವವು ಆಗುವುದು. ಪ್ರಾಣಾಯಾಮದ ಮೂರನೆಯ ಅಥವಾ ಕೊನೆಯ ಹಂತವೆನಿಸಿವೆ. ಚಿತ್ತಸ್ಥೈರ್ಯವಿಲ್ಲದೆ ಅನೇಕ ದಿನ-ಗಳವರೆಗೆ ಅಭ್ಯಾಸವನ್ನು ಮಾಡಿದರೂ ಅದರಿಂದೇನು ಲಾಭವಿಲ್ಲ. ಚಿತ್ತಸ್ಥೈರ್ಯವೇ ಅತ್ಯಂತ ಮಹತ್ವದ ಸಂಗತಿ. ಪ್ರಾಣಾಯಾಮವು ದೇಹಕ್ಕೆ ಒಳ್ಳೆಯ ಟಾನಿಕ್ ಇದ್ದ ಹಾಗೆ. ಈ ಅಭ್ಯಾಸ ಮಾಡುವವರಿಗೆ ಅನೇಕ ಜನ ಸ್ನೇಹಿತರು ಅನುಯಾಯಿಗಳು ಆಗುತ್ತಾರೆ, ನೀವುಯಾವ ಪ್ರಯತ್ನವನ್ನು ಮಾಡದೆ ಬೇರೆಯವರ ಮೇಲೆ ವರ್ಚಸ್ಸು ಬೀರ ಬಲ್ಲಿರಿ ಅದು ಸಾಧ್ಯವೇ. ಇಲ್ಲಿ ಯಾವುದಾದರೊಂದು ಒಲವು ಬೇಕೆ ಬೇಕು ಅಂದರೇನೆ ಅವನು ಪ್ರಭಾವಿತನಾಗುವನು.

## ಪ್ರಾಣಾಯಾಮದ ಉಪಯೋಗಗಳು

1) ದೇಹದ ರೋಗ ನಿರೋಧಕ ಶಕ್ತಿ ಬೆಳೆಯುವದು
2) ತಲೆ ನೋವು ದೂರಾಗುವದು
3) ಪುಪ್ಪಸಗಳು ಬಲಗೊಳ್ಳುವವು.
4) ದೇಹದ ಅಂಗಾಂಗಗಳಿಗೆ ಯಾವ ತೊಂದರೆಇದ್ದರೂ ಅವುಗಳ ನಿವಾರಣೆಗೆ ಇದು ಶ್ರೇಷ್ಟ ಉಪಾಯ
5) ಪಚನ ಕ್ರಿಯೆ ಸುಧಾರಿಸುವುದು
6) ದಣಿದ ಮೆದಳು ಪುನಃ ಚೇತನ ಗೊಳ್ಳುವುದು
7) ಗಾಢ ನಿದ್ರೆಗೆ ಸಹಾಯಕವಾಗುವದು
8) ಚಿತ್ತಸ್ಥೈರ್ಯವನ್ನು ಬೆಳೆಯಿಸುತ್ತದೆ.
9) ದೇಹದಲ್ಲಿ ವಿಷಯುಕ್ತ ಮತ್ತು ಸಂಚಯ ಯುಕ್ತ ಪದಾರ್ಥಗಳನ್ನು ಕಡಿಮೆ ಮಾಡಬಹುದು.

10) ಸ್ವಾಮಿ ವಿವೇಕಾನಂದರು ಹೇಳುವಂತೆ ಪ್ರಾಣಾಯಾಮ ಪುಪ್ಪಸಗಳ ಮೇಲೆ, ಪುಪ್ಪಸಗಳು ಹೃದಯದ ಮೇಲೆ, ಹೃದಯವು ರಕ್ತಸಂಚಯದ ಮೇಲೆ, ರಕ್ತ ಸಂಚಯುವು ಮೆದುಳಿನ ಮೇಲೆ, ಮೆದುಳು ಮನಸ್ಸಿನ ಮೇಲೆ, ಸತ್ಪರಿಣಾಮವನ್ನು ಬೀರುವುದು.

(ಮುಂದುವರಿಯುವುದ)

## ಭಗವಾನ್ ಬುದ್ಧ (25ನೇ ಪುಟದಿಂದ ಮುಂದುವರೆದಿದೆ)

ಪಂಚ ವಿಂಶತಿ ಶತಕ ಗತಿಸಿರೆ ಬುದ್ಧದೇವ!
ಮುಂಚೆಗಿಂತಧಿಕಮೆನೆ ಬೆಳಗಿ ಪೊಳೆವ! ಬಾ
ನಂಚಿಗೆ ಕೀರ್ತಿಕಲಶ! ಧರ್ಮಜ್ಞ ॥ 821 ॥

### ಜನನ ಬಾಲ್ಯ

ಮೊದಲಿವನಾಮವೆನೆ ಸಿದ್ಧಾರ್ಥವೆನುತಿರಲು
ಉದಿಸೆ! ಪಿತ ಶುದ್ಧೋದನ ತಾಯಿ ಮಾಯಾದೇವಿ-
ಯುದರದಲಿ ಬುದ್ಧ! ಧರ್ಮಜ್ಞ ॥ 822 ॥

ರಾಜಧಾನಿಯೆನೆ ಬಿಹಾರದಲಿ 'ಕಪಿಲವಸ್ತುವು'
ತೇಜಸ್ವಿ ಬುದ್ಧ ಬೆಳೆಯುವನು ಗೌತಮಿಯ-
ಸಾಜ ಪ್ರೇಮದಲಿ! ಧರ್ಮಜ್ಞ ॥ 823 ॥

ಹೆತ್ತ ತಾಯಿ ಪೋಗಿರೆ ಪುಟ್ಟಿದೇಳು ದಿನದೊಳು
ಮುತ್ತಿನೊಲು ರಕ್ಷಿಸೆ ಚಿಕ್ಕಮ್ಮ 'ಗೌತಮಿ'! ಪೆಸ-
ರಾಯ್ತು ಗೌತಮ ಬುದ್ಧ! ಧರ್ಮಜ್ಞ ॥ 824 ॥

### ವಿದ್ಯಾಭ್ಯಾಸ-ವಿವಾಹ

ಶಾಂತಿಯುತನೆನೆ ಬುದ್ಧ! ಕಾಂತಿ ಮುಖದೊಳು ಚೆಲುವ
ನಿಂತು ವಿದ್ಯಾ ಬುದ್ಧಿಗಲಿತನು ತಂದೆಯಿಂ
ಇಂತು ಜಾಣನಿವನು ಧರ್ಮಜ್ಞ ॥ 825 ॥

ಇಪ್ಪತ್ತು ವರುಷವಾಗೆ ಬುದ್ಧದೇವಂಗೆ
ಒಪ್ಪಿದಳು ಸತಿಯಾಗಿ 'ಯಶೋಧರೆ'ಯು
ಒಪ್ಪೆಸುತ ರಾಹುಲನು! ಧರ್ಮಜ್ಞ ॥ 826 ॥

### ರಾಜ್ಯತ್ಯಾಗ

ಒಂದು ದಿನ ಬುದ್ಧಂಗೆ ಕಣ್ಣಿಗೆ ಬಿದ್ದ ಮುದುಕ
ವ ೦ಂದೆ ಸಾಗೆ ಮಹ ರೋಗಿ ಮೇಣ್ ಹೆಣನ ಕಂಡ
ಅಂದು ಚಿಂತಿಸಿದ ಧರ್ಮಜ್ಞ ॥ 827 ॥

ಜನನ ಮರಣಗಳ ಕಳೆಯಲೆಂದು ಬುದ್ಧ ಹೊರಟ
ಕನಲಿದನು ಸತಿ ಸುತರ ತೊರೆವ ಕಾಲದಲಿ
ಕೊನೆಯ ಸಲ ನೋಡಿ। ಧರ್ಮಜ್ಞ ॥ 828 ॥

### ಜ್ಞಾನೋದಯ

ಬೋಧಿವೃಕ್ಷದಡಿ ಕುಳಿತು ಧ್ಯಾನಿಸೆ ದೇವನನು
ಸಾಧಿಸಿತು ತಪವು ಜ್ಞಾನೋದಯವಾಗಿ!
ಆದನಾಗ 'ಬುದ್ಧ'! ಧರ್ಮಜ್ಞ ॥ 830 ॥

# ವಿಶ್ವಶಾಂತಿ ಕಾಪಾಡುವಲ್ಲಿ ವಿಶ್ವಸಂಸ್ಥೆಯ ಪಾತ್ರ.

ಡಾ॥ ಎಂ.ಬಿ. ಕೃಷ್ಣನ್, ಅಧ್ಯಾಪಕ, ರಾಜಕೀಯ ವಿಜ್ಞಾನ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು-560 056.

ಐದು ದಶಕಗಳ ಹಿಂದೆ ತಲೆ ಎತ್ತಿದ ವಿಶ್ವಸಂಸ್ಥೆ ಇಂದಿಗೂ ರಾಜಕೀಯ ವಲಯದಲ್ಲಿ ಚರ್ಚೆಯ ವಿಷಯವಾಗಿ ಬಹಳಷ್ಟು ಜನ ಅದರ ಸಾಧನೆ ಬಗ್ಗೆ ಸಂದೇಹ ವ್ಯಕ್ತಪಡಿಸುತ್ತಿದ್ದಾರೆ. ಅಸಾಧ್ಯವಾಗಿ ಕಾಣುವ 'ವಿಶ್ವಶಾಂತಿ' ಮತ್ತು "ಏಕವಿಶ್ವ" ಸಾಧನೆ ಮತ್ತು ಸ್ಥಾಪನೆಯತ್ತ ನಡೆಯುತ್ತಿರುವ ಒಂದು ಬೃಹತ್ ಸಂಸ್ಥೆ ಇದು ಎಂಬುದನ್ನು ನಾವು ಸದಾ ಮರೆಯಬಾರದು. ಇದರ ಎರಡು ಗುರಿಗಳೆಂದರೆ ವಿಶ್ವ ಸಂಸ್ಥೆಯ ಸದಸ್ಯ ರಾಷ್ಟ್ರಗಳಿಗೆ ಭದ್ರತೆ ಮತ್ತು ಸೌಹಾರ್ದತೆಯನ್ನೊದಗಿಸುತ್ತದೆ ಮತ್ತು ವಿಶ್ವದಲ್ಲಿ ಶಾಂತಿ ಸ್ಥಾಪನೆ. ಈ ಸಂಸ್ಥೆ ವಿಶ್ವದ ಎಲ್ಲ ಜನ ಸಮುದಾಯದ ಆಶೋತ್ತರಗಳ ಪ್ರತೀಕವಾಗಿದೆ.

ಪ್ರಥಮ ವಿಶ್ವಸಮರದನಂತರ ವಿಶ್ವಶಾಂತಿಯನ್ನು ಸ್ಥಾಪಿಸುವಲ್ಲಿ ಲೀಗ್-ಆಫಿನೇಷನ್ಸ್ ವಿಫಲವಾದ ವಿಷಯ ಸರ್ವವಿದಿತ. ಲೀಗನ ಎಲ್ಲದೌರ್ಬಲ್ಯಗಳನ್ನು ಇಲ್ಲವಾಗಿಸಿ, ಇನ್ನು ಹೆಚ್ಚು ಪರಿಣಾಮಕಾರಿಯಾದ ಜಾಗತಿಕ ಸಂಸ್ಥೆಯನ್ನಾಗಿ ರೂಪಿಸುವಲ್ಲಿ ಕ್ರಿಯಾತ್ಮಕ ಪಾತ್ರವಹಿಸಿದ ಇಂಗ್ಲೆಂಡಿನ ವಿನ್‌ಸ್ಟನ್ ಚರ್ಚಿಲ್, ರಷ್ಯಾದ ಸ್ಟಾಲಿನ್ ಮತ್ತು ಅಮೇರಿಕಾದ ರೂಜ್‌ವೆಲ್ಟ ಮುಖ್ಯರು. ಆಧುನಿಕಯುಗದ ಪರವಾಲಂಬಿ ಶಸ್ತ್ರಗಳ ಅನಿವಾರ್ಯತೆಯನ್ನು ತಿಳಿದು, ಎಲ್ಲ ರಾಷ್ಟ್ರಗಳೊಡನೆ ಸೌಹಾರ್ದಯುತ ಬಾಳುನಡೆಸುವ ಪ್ರಥಮ ಪ್ರಯತ್ನವಾಗಿ ವಿಶ್ವಸಂಸ್ಥೆ 24ನೇ ಅಕ್ಟೋಬರ್ 1945ರಂದು ಸ್ಥಾಪಿತವಾಯಿತು. ಪ್ರಾರಂಭದಲ್ಲಿ 50 ರಾಷ್ಟ್ರಗಳೊಂ ಅಸ್ತಿತ್ವಕ್ಕೆ ಬಂದ ವಿಶ್ವಸಂಸ್ಥೆ ಇಂದು 173ಕ್ಕೂ ಹೆಚ್ಚು ರಾಷ್ಟ್ರಗಳು ಸದಸ್ಯರಾಗಿರುವು ಇದರ ಬೆಳವಣಿಗೆಯ ದಿಕ್ಕನ್ನು ಸೂಚಿಸುತ್ತದೆ. ಈ ವಿಶ್ವಸಂಸ್ಥೆ ಜಾಗತಿಕ ಶಾಂತಿಯನ್ನ ಕಾಪಾಡುವಲ್ಲಿ ಸಾಕಷ್ಟು ಪ್ರಯತ್ನ ನಡೆಸಿದೆ.

ವಿಶ್ವಸಂಸ್ಥೆಯ ಪ್ರಣಾಳಿಕೆಯಲ್ಲಿ ತಿಳಿಸಿರುವಂತೆ ಅದರ ಪ್ರಮುಖ ಧ್ಯೇಯೋದ್ದೇಶಗಳು ಈ ಕೆಳಕಂಡಂತಿವೆ.

1) ನಾಳಿನ ಜನಾಂಗವನ್ನು ಯುದ್ಧದ ಭೀತಿಯಿಂದ ಪಾರುಮಾಡುವುದು.
2) ರಾಷ್ಟ್ರಗಳ ನಡುವೆ ಸೌಹಾರ್ದಯುತ ಭಾವನೆ ಬೆಳಸಿ ಆಕ್ರಮಣಕಾರೀ ರಾಷ್ಟ್ರಗಳ ವಿರುದ್ಧ ಸಾಮೂಹಿಕ ಕ್ರಮ ತೆಗೆದುಕೊಳ್ಳುವುದು.
3) ವ್ಯಕ್ತಿಗಳ ನಡುವಿನ ಮತ್ತು ರಾಷ್ಟ್ರಗಳ ನಡುವಿನ ಅಸಮಾನತೆಯನ್ನು ಹೋಗಲಾಡಿಸಿ ಸರ್ವರ ಸಹಬಾಳ್ವೆ ಸಾಧ್ಯವಾಗುವಂತೆ ಮಾಡುವುದು.

4) ಎಲ್ಲ ಜನರ ಎಲ್ಲ ಹಕ್ಕುಗಳನ್ನು ದೊರಕಿಸಿಕೊಟ್ಟು ಅವರ ವ್ಯಕ್ತಿತ್ವ ವಿಕಾಸಕ್ಕೆ ಸಹಾಯಮಾಡುವುದು

5) ಅಂತರರಾಷ್ಟ್ರೀಯ ಕಾನೂನು ಮತ್ತು ಒಪ್ಪಂದಗಳನ್ನು ಎಲ್ಲಾ ರಾಷ್ಟ್ರಗಳೂ ಪಾಲಿಸುವ ಸೂಕ್ತ ವಾತಾವರಣವನ್ನು ನಿರ್ಮಿಸುವುದು.

6) ವಿಶ್ವದಾದ್ಯಂತ ಜನರ ಜೀವನ ಮಟ್ಟವನ್ನು ಉತ್ತಮಪಡಿಸುವುದು.

ಇಷ್ಟಲ್ಲದೇ ಇನ್ನೂ ಸ್ವಾತಂತ್ರ್ಯ ಹೊಂದಿರದ ರಾಷ್ಟ್ರಗಳು ಸ್ವಾತಂತ್ರ್ಯ ಪಡೆಯುವಲ್ಲಿ ವಿಶ್ವಸಂಸ್ಥೆ ಮಹತ್ತರಪಾತ್ರ ವಹಿಸುತ್ತಾ ಬಂದಿದೆ - ಮುಂದೆಯೂ ವಹಿಸುವುದಾಗಿದೆ.

ವಿಶ್ವಸಂಸ್ಥೆಯ ಬಹುಮುಖ್ಯ ಅಂಗಗಳೆಂದರೆ-ಸಾಮಾನ್ಯ ಸಭೆ ಮತ್ತು ಭದ್ರತಾ ಮಂಡಳಿ, ಸಾಮಾನ್ಯ ಸಭೆ ವರ್ಷಕ್ಕೊಮ್ಮೆ ಸಭೆ ಸೇರುತ್ತದೆ. ಇದನ್ನು ವಿಶ್ವದ ಪಾರ್ಲಿಮೆಂಟ್ ಎಂದರೆ ಉತ್ಪ್ರೇಕ್ಷೆಯಾಗುವುದಿಲ್ಲ. ವಿಶ್ವಸಂಸ್ಥೆಯ ಮೂಲಭೂತ ಧ್ಯೇಯೋದ್ದೇಶಗಳನ್ನು ಈಡೇರಿಸುವುದರಲ್ಲಿ ಸಾಮಾನ್ಯ ಸಭೆಯ ಪಾತ್ರ ಅತ್ಯಂತ ಮಹತ್ವದ್ದಾಗಿದೆ.

ಇಂದಿಗೆ 46 ವರ್ಷಗಳನ್ನೂ ಪೂರೈಸಿರುವ ವಿಶ್ವಸಂಸ್ಥೆ ಈ ದೀರ್ಘಾವಧಿಯಲ್ಲಿ ಮಹತ್ವ ಪೂರ್ಣ ಬದಲಾವಣೆಗಳನ್ನು ಹೊಂದಿವೆ. ಈ ಅವಧಿಯಲ್ಲಿ ಬಹಳಷ್ಟು ವಿವಾದಗಳನ್ನು ಬಗೆಹರಿಸಲು ಯತ್ನಿಸಿದೆ. ಕೊರಿಯಾ ವಿವಾದ, ಸೂಯೆಜ್ ಬಿಕ್ಕಟ್ಟು ಈಜಿಪ್ಟ್ ಮತ್ತು ಇಸ್ರೇಲ್ ವಿವಾದ, ಇಂಡೋನೇಷ್ಯಾ, ಪ್ಯಾಲೆಸ್ಟೈನ್, ಲಿಬಿಯಾ, ಘಾನ, ದಕ್ಷಿಣ ಆಫ್ರಿಕ - ಇವು ಮುಖ್ಯವಾಗಿವೆ. ಈ ಎಲ್ಲ ವಿವಾದಗಳೂ ಬಹು ಸಂಕೀರ್ಣವಾಗಿರುವುದರಿಂದ ಶಾಶ್ವತ ಪರಿಹಾರ ಸಾಧ್ಯವಾಗಲಾರದೆಂದರೆ ವಿಶ್ವಸಂಸ್ಥೆಯು ತನ್ನ ಕಾರ್ಯನಿರ್ವಹಣೆಯಲ್ಲಿ ಸೋತಿದೆ ಎನ್ನಲಾಗದು.

ವಿಶ್ವಸಂಸ್ಥೆ ಉದಯವಾದಾಗಿನಿಂದ ಈವರೆಗೆ ಸುಮಾರು 250ಕ್ಕೂ ಹೆಚ್ಚು ಅಂತರ ರಾಷ್ಟ್ರೀಯ ವಿವಾದಗಳನ್ನು ಪರಿಗಣಿಸಿದೆ ಹಲವು ಬಾರಿ ಪರಿಹಾರೋಪಾಯ ಗಳನ್ನು ಸೂಚಿಸಿದೆ, ಮತ್ತೆ ಕೆಲವು ಬಾರಿ ಆ ಪ್ರಯತ್ನದಲ್ಲಿ ಸೋತಿದೆ, ಮತ್ತು ಕೆಲವು ವಿವಾದಗಳಲ್ಲಿ ಸದಸ್ಯ ರಾಷ್ಟ್ರಗಳು ವಿಶ್ವಸಂಸ್ಥೆಯ ನಿರ್ಣಯಗಳನ್ನು ಕಾರ್ಯರೂಪಕ್ಕಿ ಳಿಸುವಲ್ಲಿ ನಿರಾಸಕ್ತವಾಗಿವೆ. ಈ ಮಿಶ್ರಿತ ಫಲಿತಾಂಶ ವಿಶ್ವಸಂಸ್ಥೆಯ ಶಿಲ್ಪಿಗಳ ನಿರೀಕ್ಷೆಯನ್ನು ಹುಸಿಯನ್ನಾಗಿಸಿದೆಯಾದರೂ ಬೇರೆ ದಾರಿಯೇ ಇಲ್ಲ. ಇದೇ ಸಂದರ್ಭದಲ್ಲಿ ವಿಶ್ವಸಂಸ್ಥೆ ಯಶಸ್ವಿಯಾಗಿ ಕಾರ್ಯ ನಿರ್ವಹಿಸಿದ ಬಗೆಗೆ ಒಂದೆರಡು ದೃಷ್ಟಾಂತಗಳ ಮುಖಾಂತರ ಸ್ಥೂಲವಾಗಿ ಅರಿಯಬಹುದು: ವಿಶ್ವಸಂಸ್ಥೆಯು ತನ್ನ ಅವಾಗಹನೆಗೆ

ತೆಗೆದುಕೊಂಡ ಪ್ರಪ್ರಥಮ ವಿವಾದ ಸೋವಿಯತ್ ರಷ್ಯಾ ಮತ್ತು ಇರಾನ್ ನಡುವಿ ವಿವಾದ. ಜನವರಿ 1946ರಂದು ರಷ್ಯಾ ತನ್ನ ಭೂಪ್ರದೇಶ ಅಕ್ರಮಿಸಿಕೊಂಡಿ ಯೆಂದು ಇರಾನ್ ವಿಶ್ವಸಂಸ್ಥೆಗೆ ಮೊರೆ ಹೋಯಿತು. ಇದಕ್ಕೆ ಸಂಬಂಧಿಸಿದ ಎ ವಿಷಯಗಳನ್ನು ಚರ್ಚಿಸಿ, ಈ ಎರಡು ರಾಷ್ಟ್ರಗಳು ಶಾಂತಿಯುತವಾಗಿ ತಮ ವಿವಾದವನ್ನು ಬಗೆಹರಿಸಿಕೊಳ್ಳುವಂತೆ ವಿಶ್ವಸಂಸ್ಥೆ ಅರಿಕೆ ಮಾಡಿತು. ಆದರಂತೆಯೆ ಅತಿ ಶೀಘ್ರದಲ್ಲಿಯೇ ಎರಡು ರಾಷ್ಟ್ರಗಳು ಒಮ್ಮತಕ್ಕೆ ಬಂದವು.

ಬಹುದಿನಗಳಿಂದ ನಿರಂತರವಾಗಿ ವಿಶ್ವಸಂಸ್ಥೆಯನ್ನೂ ಕಾಡುತ್ತಿರುವ ಮತ್ತೊ ವಿವಾದವೆಂದರೆ ಕಾಶ್ಮೀರ ಪ್ರಶ್ನೆ. ಇದರಲ್ಲಿ ಇಂಡಿಯಾ ಮತ್ತು ಪಾಕಿಸ್ತಾನ ರಾಷ್ಟ್ರ ಭಾಗಿಯಾಗಿವೆ. ಈ ವಿವಾದದ ಸ್ವರೂಪ ವಿಚಿತ್ರವಾದುದು. ಎಷ್ಟೋ ಬಾರಿ ಅತ ಕಾರೀ ಘಟನೆಗಳು ಸಂಭವಿಸುವುದನ್ನೂ ತಡೆಗಟ್ಟುವಲ್ಲಿ ವಿಶ್ವಸಂಸ್ಥೆ ಪೂರ್ಣ ಯಶ ಯಾಗಿದೆ. ಇಷ್ಟೆಲ್ಲದರ ನಡುವೆಯೂ ಈ ವಲಯದಲ್ಲಿ ಶಾಂತಿ ಸ್ಥಾಪನೆಯಾಗಿಲ್ಲ.

ದಕ್ಷಿಣ ಆಫ್ರಿಕದ ಬರ್ಬರಸರ್ಕಾರ ಮತ್ತೊಂದು ಉದಾಹರಣೆ. ಇಲ್ಲ ಬಿಳಿಯ ಅನುಸರಿಸಿಕೊಂಡು ಬಂದಿರುವ ವರ್ಣಭೇದ ನೀತಿ ವಿಶ್ವಸಂಸ್ಥೆ ಎದುರಿರುವ ಅತ್ಯ ಕ್ಲಿಷ್ಟ ಸವಾಲುಗಳಲ್ಲೊಂದಾಗಿದೆ. ಬಹು ಸಂಖ್ಯಾತ ಕಪ್ಪುಜನರು ಆರ್ಥಿಕ ಮತ್ತು ಸಾಮಾಜಿಕ ಸವಲತ್ತುಗಳಿಂದ ದೂರವುಳಿದು ಎಲ್ಲಅವಕಾಶಗಳಿಂದ ವಂಚಿತರಾಗಿದ್ದಾ ಬಡತನದ ಬದುಕು ಅಭ್ಯಾಸವೇ ಆಗಿಹೋಗಿದೆ. ಅಲ್ಪಸಂಖ್ಯಾತ ಬಿಳಿಯರು ಎ ರಾಜಕೀಯ ಮತ್ತು ಆರ್ಥಿಕ ಅಧಿಕಾರಗಳ ಮೇಲೆ ಏಕಸ್ವಾಮ್ಯವನ್ನು ಹೊಂದಿದ್ದಾ ಈ ದಿಸೆಯಲ್ಲಿ ವಿಶ್ವಸಂಸ್ಥೆ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಿದೆ. ವಿಶ್ವಸಂಸ್ಥೆ ಮಹಾ ಕಾರ್ಯದರ್ಶಿಯವರು 1961 ರಲ್ಲಿ ದಕ್ಷಿಣ ಆಫ್ರಿಕಕ್ಕೆ ಭೇಟಿ ನೀಡಿ ಅಲ್ಲಿ ಅಧಿಕಾರಾರೂಢ ವ್ಯಕ್ತಿಗಳೊಡನೆ ಚರ್ಚಿಸಿ ಈ ಸಮಸ್ಯೆಯ ನಿವಾರಣೆಗೆ ಸೂಕ್ತಕ್ರ ಕೈಗೊಳ್ಳುವಂತೆ ಮನವಿ ಮಾಡಿದ್ದರು, ಇದಲ್ಲದೇ ಎರಡುವಿಶೇಷ ನಿಧಿಗಳನ್ನು ಸ್ಥಾಪಿ ಅಲ್ಲಿಯ ಅಮಾಯಕರಿಗಾಗಿ ಬೆಂಬಲವಾಗಿದೆ. ಮತ್ತೂ ಮುಂದುವರೆದು ಮಿಲಿಟ ಮತ್ತು ಆರ್ಥಿಕ ಬಹಿಷ್ಕಾರಗಳನ್ನು ಪರ್ಯಾಲೋಚಿಸುತ್ತಿದೆ.

ಈ ಮೂರು ಸಂಗತಿಗಳು ಕೇವಲ ವಿಶ್ವಸಂಸ್ಥೆಯ ತುಡಿತವನ್ನರಿಯುವ ಮೂ ತುಣುಕುಗಳು ಮಾತ್ರ

ವಿಶ್ವಸಂಸ್ಥೆಯ ಈ ಯಶಸ್ಸಿನ ನೆರಳಾಗೇ ಆದರ ಸೋಲುಗಳೂ ಬೃಹದಾಕಾರದ ಬೆಳೆಯುತ್ತಿವೆ. 1948 ರಿಂದಲೂ ಬಗೆಹರಿಯಲಾಗದೇ ಉಳಿದುಕೊಂಡಿರು ಪಲೇಸ್ಟೀನಿಯ ಪ್ರಶ್ನೆ, ಇಸ್ರೇಲಿನ ಯಾರೂ ನಿಯಂತ್ರಿಸಲಾಗದ ಆಕ್ರಮಣಕಾ ಧೋರಣೆ, ಥಾಯ್‌ಲ್ಯಾಂಡ್ ಬಿಕ್ಕಟ್ಟು, ಕೆಂಪೂಚಿಯ ವಿವಾದ, ಇತ್ತೀಚೆಗಿನ ಗ್ರೆನಡಾ

ಮೇಲಿನ ಅಮೇರಿಕೆಯ ಆಕ್ರಮಣ——ವಿಶ್ವಸಂಸ್ಥೆಯಿಂದ ಪರಿಹಾರವಾಗಿಲ್ಲ, ಎಷ್ಟೋ ಬಾರಿ ವಿಶ್ವಸಂಸ್ಥೆ ತನ್ನ ಹಳೆಯ ನಿರ್ಣಯಗಳನ್ನೇ ಮತ್ತೆ ಮತ್ತೆ ಜ್ಞಾಪಿಸಿಕೊಳ್ಳುತ್ತಾ ತಪ್ಪಿತಸ್ಥ ರಾಷ್ಟ್ರಗಳನ್ನು ಬರೀಮಾತಿನಲ್ಲಿ ಖಂಡಿಸುವುದಷ್ಟೇ ಕಾರ್ಯವಾಗಿದೆ.

ಇದೇ ಸಂದರ್ಭದಲ್ಲಿ ವಿಶ್ವಶಾಂತಿಗೆ ಮಾರಕವಾಗಿರುವ ಅಸ್ತ್ರಗಳನ್ನು ತಯಾರಿಸುವಲ್ಲಿ ಪ್ರಬಲ ರಾಷ್ಟ್ರಗಳ ನಡುವೆ ಪೈಪೋಟಿಯನ್ನು ಕಾಣಬಹುದಾಗಿದೆ. ಪ್ರಥಮ ಮಹಾಯುದ್ಧದಲ್ಲಿ ಬಳಕೆಯಾದ ಸಬ್‌ಮೇರೀನ್‌ಗಳು ತಮ್ಮ ಪ್ರಾಮುಖ್ಯತೆಯನ್ನಿಂದು ಕಳೆದುಕೊಂಡಿವೆ. ಪರಮಾಣು ಬಾಂಬುಗಳು ಮತ್ತು ಕ್ಷಿಪಣಿಗಳು ಇಂದು ಭಯಂಕರ ಪರಿಣಾಮವನ್ನುಂಟು ಮಾಡಬಲ್ಲವಾಗಿವೆ. ಇಂತಹ ಘೋರ ವಿಪತ್ತನ್ನು ತಡೆಗಟ್ಟಲು ನಿಶ್ಶಸ್ತ್ರೀಕರಣ ಸೂತ್ರವನ್ನು ವಿಶ್ವಸಂಸ್ಥೆ ಯೋಜಿಸಿರುವ ಎಲ್ಲ ಯೋಜನೆಗಳಿಗಿಂತ ನಿಶ್ಶಸ್ತ್ರೀಕರಣ ಹೆಚ್ಚು ಪರಿಣಾಮಕಾರಿಯಾಗಬಹುದಾದ ಸಾಧ್ಯತೆಗಳಿವೆ. ಇದರಂತೆ ಯಾವ ಸದಸ್ಯ ರಾಷ್ಟ್ರವೂ ಮಾರಕಾಸ್ತ್ರಗಳನ್ನು ತಯಾರಿಸಲೇ ಬಾರದು. ನಾಗರೀಕ ರಾಷ್ಟ್ರಗಳು ತಮ್ಮ ಆಂತರಿಕ ಅವಶ್ಯಕತೆಗಳಿಗನುಗುಣವಾಗಿ ಸಣ್ಣ ಪ್ರಮಾಣದ ಮಿಲಿಟರಿ ಶಸ್ತ್ರಾಸ್ತ್ರಗಳನ್ನು ತಯಾರಿಸಿಕೊಳ್ಳಬಹುದು. ಆದರೆ ಅತಿಮಾರಕಾಸ್ತ್ರಗಳನ್ನು ತಯಾರಿಸಬಾರದು. ಇದೊಂದು ಭ್ರಮೆಯೆಂದೆನಿಸ ಬಹುದು. ರೋಮಾಂಚಕ ಕಲ್ಪನೆಯೆನಿಸಬಹುದು. ಆದರೆ, ತೀರಾ ಅನಿವಾರ್ಯವಾದ ಒಂದೇ ಆಯ್ಕೆಯಾಗಿದೆಯೆನ್ನುವುದನ್ನು ವಿಶ್ವಸಂಸ್ಥೆ ಎಲ್ಲ ಸದಸ್ಯರಾಷ್ಟ್ರಗಳ ಮನ ಪರಿವರ್ತನೆಯಲ್ಲಿ ಈ ಕನಸು ನನಸಾದಾಗ ಬಹುಶಃ ಎಲ್ಲ ಜನರು ಭೀತಿಯೇ ಇದರ ಹೊಸ ಶಂಕೆಯನ್ನಾರಂಭಿಸ ಬಹುದು. ಅಮೇರಿಕಾ ತನ್ನ ಒಂದುವರ್ಷದ ಮಿಲಿಟರಿ ವೆಚ್ಚವನ್ನು ಸದ್ವಿನಿಯೋಗ ಪಡಿಸಿದರೆ ವಿಶ್ವದ ಎಲ್ಲ ಜನರ ಹಸಿವು, ಬಡತನ, ನಿರಕ್ಷರತೆ ಹೋಗಲಾಡಿಸಬಹುದು. ಈ ದಿಕ್ಕಿನಲ್ಲಿ ವಿಶ್ವಸಂಸ್ಥೆಗಿಂತ ಬಹುಪಾಲು ಹೆಚ್ಚಾಗಿ ಸದಸ್ಯ ರಾಷ್ಟ್ರಗಳು ತಮ್ಮ ತಮ್ಮ ಸ್ವಾರ್ಥವನ್ನು ಬದಿಗೊತ್ತಿ, ಸರ್ವಜನ ಸುಖದತ್ತ ಯೋಚಿಸಬೇಕು. ಮುಖ್ಯವಾಗಿ ಪ್ರಮುಖ ರಾಷ್ಟ್ರಗಳಾದ ಅಮೇರಿಕ, ರಷ್ಯಾ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ ಈ ರಾಷ್ಟ್ರಗಳಲ್ಲಿ ವಿವೇಕ ಮೂಡಬೇಕು. ವಿಶ್ವಸಂಸ್ಥೆ ತನ್ನೆಲ್ಲ ಇತಿಮಿತಿಗಳೊಳಗೂ ಇಂತಹ ಎಲ್ಲ ಪ್ರಯತ್ನಗಳನ್ನೂ ಮಾಡುತ್ತಲೇಬಂದಿದೆ.

ವಿಶ್ವಶಾಂತಿಯನ್ನು ಕಾಪಾಡುವಲ್ಲಿ ವಿಶ್ವಸಂಸ್ಥೆಯ ಪಾತ್ರವನ್ನು ಚರ್ಚಿಸುವಾಗ ಮತ್ತೊಂದು ಪ್ರಮುಖ ಸಂಗತಿಯನ್ನು ದಾಖಲುಗೊಳಿಸಬೇಕಾಗುತ್ತದೆ. ಅದೇನೆಂದರೆ 1986ನೇ ಇಸವಿಯನ್ನು ವಿಶ್ವಶಾಂತಿಯ ಅಂತರ ರಾಷ್ಟ್ರೀಯ ಶಾಂತಿ ವರ್ಷ

(Inter national year of Peace) ವನ್ನಾಗಿ ಘೋಷಿಸಲಾಗಿದೆ.

ಅಂತಿಮವಾಗಿ ತೀರ್ಮಾನಿಸುವಾಗ ವಿಶ್ವಸಂಸ್ಥೆಯನ್ನು ಎರಡು ದೃಷ್ಟಿಯಿಂದ ನೋಡಬಹುದಾಗಿದೆ. ಪ್ರಪ್ರಥಮವಾಗಿ, ಇದು ವಿಶ್ವಸರ್ಕಾರ ಸ್ಥಾಪನೆಯ ದಿಕ್ಕಿನತ್ತ ಮೊದಲ ಹೆಜ್ಜೆಯೆಂದೂ, ಎರಡನೆಯದಾಗಿ, ಸಾರ್ವಭೌಮ ರಾಷ್ಟ್ರಗಳ ನಡುವೆ ಸಹಕಾರ ಮತ್ತು ಸಹಬಾಳ್ವೆ ಸ್ಥಾಪಿಸುವ ವ್ಯರ್ಥ ಪ್ರಯತ್ನವೆಂದೂ ಹೇಳಬಹುದು. ಆದರೆ ಈ ಹೊತ್ತಿನಲ್ಲಿ ವಿಶ್ವಸಂಸ್ಥೆಯ ಬಗೆಗೆ ಇಂತಹ ತೀರ್ಮಾನ ಸಮಂಜಸವಲ್ಲ ಇಂದು ನಾಗರೀಕ ರಾಷ್ಟ್ರಗಳು ಸಂಪೂರ್ಣ ಸ್ವಾತಂತ್ರ್ಯ ಮತ್ತು ಸಾರ್ವಭೌಮಾಧಿಕಾರತ್ವವನ್ನು ಹೊಂದಿವೆ. ದಿನದಿನಕ್ಕೆ ರಾಷ್ಟ್ರಗಳು ತಮ್ಮ ಅಧಿಕಾರವನ್ನು ಹೆಚ್ಚಿಸಿಕೊಳ್ಳುತ್ತಿವೆ. ಅವುಗಳ ಅಧಿಕಾರ ಕ್ಷೀಣಿಸುವ ಯಾವ ಸೂಚನೆಯೂ ಕಂಡುಬರುತ್ತಿಲ್ಲ. ಜಾಗತಿಕ ವ್ಯವಸ್ಥೆಗಾಗಿ ಯಾವ ರಾಜಿಗಾಗಲೀ ಅಥವ ತ್ಯಾಗಕ್ಕಾಗಲೀ ರಾಷ್ಟ್ರಗಳು ತಯಾರಿಲ್ಲ. ಈ ಹಂತದಲ್ಲೆ ನಮ್ಮೆಲ್ಲ ಸಮಸ್ಯೆಗಳಿಗೆ ಸುಲಭ ಮತ್ತು ಶೀಘ್ರಪರಿಹಾರಗಳನ್ನು ಕಂಡುಕೊಳ್ಳಲಾಗುವುದಿಲ್ಲ. ಏಕೆಂದರೆ ನಾಗರೀಕ ರಾಷ್ಟ್ರಗಳ ಸಾರ್ವಭೌಮತ್ವ ಮತ್ತು ಅಂತರರಾಷ್ಟ್ರೀಯ ವ್ಯವಸ್ಥೆ ಹಲವಾರು ವೈರುಧ್ಯಗಳನ್ನೊಳಗೊಂಡಿದೆ. ಎಲ್ಲ ರಾಷ್ಟ್ರಗಳೂ ತಮ್ಮ ಭವಿಷ್ಯವನ್ನು ತಾವೇ ರೂಪಿಸಿಕೊಳ್ಳುವ ಹವಣಿಕೆಯಲ್ಲಿವೆ, ಅಂತೆಯೇ, ವಾಣಿಜ್ಯ, ಸಂಪರ್ಕ, ಆರ್ಥಿಕ ಪ್ರಗತಿ ಮತ್ತು ವಿಶ್ವಶಾಂತಿ ಇವುಗಳಿಗಾಗಿ ಇತರ ರಾಷ್ಟ್ರಗಳ ಮೇಲೆ ಅವಲಂಬಿತವಾಗಿವೆ. ಇದು ನಮ್ಮ ಬದುಕಿನ ವಿಪರ್ಯಾಸ.

---

## ಆಜೀವ ಸದಸ್ಯರಲ್ಲಿ ಮನವಿ.

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರಮುಖೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ.

**ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೆ ಬರೆಯಿರಿ.**

# ಶ್ರದ್ಧಾಂಜಲಿ

ದಿನಾಂಕ 30-3-92 ರಂದು ಮುಂಜಾನೆ ಮಾಗಡಿ ತಾಲ್ಲೂಕು ಚಿಕ್ಕಮುಸ್ಕಲ್ ಗ್ರಾಮದ ಜಂಗಮ ಮಠದ **ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು** ರಸ್ತೆ ಅಪಘಾತದಲ್ಲಿ ಲಿಂಗೈಕ್ಯರಾದುದನ್ನು ತಿಳಿದು "ಸಿದ್ಧಗಂಗಾ" ಅತೀವ ದುಃಖಕ್ಕೆ ಒಳಗಾಗಿದೆ. ಪರಮ ಪೂಜ್ಯರಿನ್ನೂ ಚಿಕ್ಕವಯಸ್ಸಿನವರಿದ್ದು, ಸಮಾಜದ ಆಸ್ತಿಯಾಗಿ ಅರಳುತ್ತಿದ್ದಾಗಲೇ ಲಿಂಗದೊಳಗೆ ಸೇರಿದುದು ಸಮಾಜಕ್ಕಾದ ಬಹು ದೊಡ್ಡ ನಷ್ಟ. ಶ್ರೀ ಮಠಕ್ಕಾದ ತುಂಬಲಾರದ ಹಾನಿ. ಶ್ರೀಗಳವರು ಶ್ರೀ ಸಿದ್ಧಗಂಗಾಮಠದ **ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ** ದಿವ್ಯ ಮಾರ್ಗದರ್ಶನದಲ್ಲಿ ಮುಂದುವರಿಯುತ್ತಿದ್ದು ಸಮಾಜೋದ್ಧಾರದ ಕಾರ್ಯದಲ್ಲಿ ತಲ್ಲೀನರಾಗಿದ್ದರು. ವಿನಯಶೀಲರಾಗಿ, ಗುರು ಲಿಂಗ ಜಂಗಮ ನಿಷ್ಠೆಯುಳ್ಳವರಾಗಿ, ವಿದ್ಯಾಕಾಂಕ್ಷಿಗಳಾಗಿ, ಸಂಸ್ಕೃತ ಪ್ರೇಮಿಗಳಾಗಿದ್ದರು. ಸೇವೆಯಲ್ಲಿ ಸಂತೋಷವನ್ನು ಕಾಣು-ತ್ತಿದ್ದರು. ಪೂರ್ಣವಾಗಿ ಅರಳುವ ಮೊದಲೇ ಲಿಂಗದೊಳಗಾದ ಪರಮ ಪೂಜ್ಯರ ಅಗಲಿಕೆಯಿಂದ ಶ್ರೀ ಮಠದ ಭಕ್ತಾದಿಗಳಿಗೆ ಉಂಟಾಗಿರುವ ದುಃಖದಲ್ಲಿ **"ಸಿದ್ಧಗಂಗಾ"** ಸಹಭಾಗಿಯಾಗಿರುವುದಲ್ಲದೆ ಸಮಾಜ ಬಾಂಧವರಿಗೆ ಶ್ರೀಗಳವರ ಅಗಲಿಕೆಯಿಂದಾದ ನೋವನ್ನು ಭರಿಸುವ ಶಕ್ತಿಯನ್ನು ಬಸವಾದಿ ಪ್ರಮಥರು, **ಶ್ರೀ ಸಿದ್ಧಗಂಗಾ ಗುರು ಪರಂಪರೆ** ನೀಡಲೆಂದು ಪ್ರಾರ್ಥಿಸುತ್ತ, ಅಗಲಿದ **ಪರಮ** ಪೂಜ್ಯ **ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರಿಗೆ** ಭಕ್ತಿಪೂರ್ವಕ ಶ್ರದ್ಧಾಂಜಲಿಯನ್ನರ್ಪಿಸುತ್ತದೆ **'ಸಿದ್ಧಗಂಗಾ'.**

# ವಿದ್ಯಾರ್ಥಿ ಜೀವನದ ಬೆಳಕುಸರಣಿ–೧೯

ಬಿ. ಎಸ್. ಕೃಷ್ಣಮೂರ್ತಿ, ನಂ. 5, ಸೀತಾವಿಲಾಸ ರಸ್ತೆ. ಮೈಸೂರು-570024

**ನಡತೆ ತಿದ್ದಿಕೊಳ್ಳುವುದು:**

ವಿದ್ಯಾರ್ಥಿಗಳು ಮಾತ್ರವೇ ಅಲ್ಲದೆ ಪ್ರತಿ ಮಾನವನೂ ತಮ್ಮಲ್ಲಿರುವ ದುರ್ನಡತೆಗಳನ್ನು ತಿದ್ದಿಕೊಂಡು ಗಣ್ಯತೆಯನ್ನು ಹೊಂದಬೇಕು. ಮನಸ್ಸು ಹೆಂಡ ಕುಡಿದ ಕೋತಿಯಂತೆ ಚಿತ್ತವಿಕಾರದಿಂದಿರುತ್ತದೆ. ಕಡಿವಾಣ ಇಲ್ಲದೆ ಇರುವ ಕುದುರೆಯಂತೆ ಎತ್ತೆತ್ತಲೋ ಸಂಚರಿಸುತ್ತದೆ. ಆದ್ದರಿಂದ ಈ ಚಂಚಲದ ಮನಸ್ಸನ್ನು ಹತೋಟಿಯಲ್ಲಿಟ್ಟಿರಬೇಕಾದ ಅವಶ್ಯಕತೆ ಇದೆ ಎಂಬುದನ್ನು ನೆನಪಿನಲ್ಲಿ ಇಟ್ಟು ಪ್ರಜ್ಞಾವಂತರಾಗಬೇಕಾಗಿದೆ.

ತತ್ರಾಪಿ ವಿದ್ಯಾರ್ಥಿಗಳ ಮನಸ್ಸು ಬಹಳ ಚಂಚಲವಾಗಿರುತ್ತದೆ. ಇದರ ಕಾರಣ ಅವರಿಗೆ ಯಾವ ಬಗೆಯ ಯೋಚನೆಯಾಗಲಿ, ಜವಾಬ್ದಾರಿಯಾಗಲಿ ಇರುವುದಿಲ್ಲ. ಅವರಿಗೆ ಇರಬೇಕಾದ್ದು ಓದುವ ಹವ್ಯಾಸವೊಂದೇ ಇರುವುದು. ವಿದ್ಯೆಯು ಸಕ್ರಿಯವಾಗಿ ಬರಬೇಕಾದರೆ ವಿದ್ಯಾರ್ಥಿಗಳು ತಮ್ಮ ನಡತೆಯ ವಿಷಯದಲ್ಲಿ ಜಾಗರೂಕರಾಗಿರಬೇಕಲ್ಲದೆ ಕಠಿಣವಾಗಿಯೂ ಇರಬೇಕು. ದುರ್ಜನರಾದ ಗೆಳೆಯರಸಂಗ ಮಾಡದೆ ಇರಬೇಕಾದ್ದು ಮುಖ್ಯ ಗುರಿಯೊಂದೇ! ಹೀಗೆ ಮಾಡದೆ ತಮ್ಮ ಮನೋವಿಕಾರದ ಸುಖಗಳನ್ನಪೇಕ್ಷಿಸಿ ದುರ್ಜನರ ದುರ್ಬೋಧನೆಗೆ ಒಳಗಾದರೆ ನೀವು ಕೆಡುವುದಲ್ಲದೆ ಮಾತಾ ಪಿತೃಗಳನ್ನೂ ದುಃಖಕ್ಕೆ ಈಡುಮಾಡಿದಂತಾಗುವುದು.

ದುಷ್ಟ ಸ್ನೇಹಿತರು ಅವರ ಇಚ್ಛೆಗಳನ್ನು ಪೂರೈಸಿ ಕೊಳ್ಳಲು ಪಿತೂರಿ ನಡೆಸಿ ನಿಮ್ಮನ್ನು ಬಲಿಪಶುಗಳನ್ನಾಗಿ ಮಾಡುತ್ತಾರೆ. ಅವರು ಬೋಧಿಸುವ ಜೇನುತುಪ್ಪದ ಮಾತಿಗೆ ಒಳಗಾಗಿ ನೀವು ಆ ಕುಜನರದಾರಿಯನ್ನೇ ಹಿಡಿಯುವಿರಿ. ಅವರು ಕುಡಿತ, ಜೂಜು, ಕಳ್ಳತನ, ಮೊದಲಾದ ಹೀನ ಕಾರ್ಯಾಸಕ್ತರಾಗಿದ್ದರೆ ಅದೇ ಮಾರ್ಗವನ್ನು ನೀವು ತುಳಿಯದಿರುವುದಿಲ್ಲ. ಕುಡಿತ, ಜೂಜುಗಳಲ್ಲಿ ಪೂರ್ಣ ಸೋಲುಂಟಾದಾಗ ಕಳ್ಳತನದ ಹಾದಿ ಹಿಡಿಯಬೇಕಾಗುವ ದುರ್ಭರ ಪ್ರಸಂಗ ಉಂಟಾಗುವುದು ಅನಿವಾರ್ಯವಾಗುತ್ತದೆ.

ಹೀಗೆ ಅಪಮಾನವಾಗುವ ಮಾರ್ಗಕ್ಕೆ ಎಡೆಕೊಡದೆ ನಿಮ್ಮನಡತೆಯನ್ನು ತಿದ್ದಿಕೊಳ್ಳುವ ಮಾರ್ಗವನ್ನು ಹಿಡಿಯುವುದು ಉತ್ತಮ ವಿದಾರ್ಥಿಗಳ ನಡೆಯಾದರೆ ನಿಮಗೆ ಕೀರ್ತಿ ಅಲ್ಲವೇ? ಆದ್ದರಿಂದ ನೀವು ಈ ಬುದ್ಧಿವಾದ ವನ್ನನುಸರಿಸಿ ನಡೆದು ಕೀರ್ತಿಪಡೆಯಿರಿ.

# ಗಾಂಧೀಜಿ ಮತ್ತು ಕ್ರಿಕೆಟ್

ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸೊಂಡೂರು, ಬಳ್ಳಾರಿ ಜಿಲ್ಲೆ.

ನವಾಬ್ ಸಾಹೇಬ್ ನನ್ನನ್ನು ನೀವೀಗಲೇ ಬೋಲ್ಡ್ ಮಾಡಿದಿರಿ ಮುಗುಳ್ನ-ಗುತ್ತಾ ಗಾಂಧೀಜಿ ಪಟೌಡಿ ನವಾಬ (ಈಗಿನ ಪಟೌಡಿಯವರ ತಂದೆ)ರೊಡನೆ ಹೇಳಿದರು. ನವಾಬರು ಗಾಂಧೀಜಿಯನ್ನು ಕಾಣಲು ಬಂದಿದ್ದರು. ಆಗಲೇ ಕುಶಲ ಆಟಗಾರರೆಂಬ ಕೀರ್ತಿ ಪಡೆದಿದ್ದರವರು. ಪ್ರಪಂಚದ ಹೆಸರಾಂತ ಬ್ಯಾಟ್ಸ್‌ಮನ್‌ರಲ್ಲಿ ಅವರು ಒಬ್ಬರು. ಸ್ವತಃ ಕ್ರಿಕೆಟ್ ಆಟಗಾರರಾದ ಗಾಂಧೀಜಿ ನಗುತ್ತ ಬನ್ನಿ ನಾವಿಬ್ಬರೂ ಕ್ರಿಕೆಟ್ ಆಡೋಣ. ಒಂದೆಡೆ ನೀವು ಇನ್ನೊಂದೆಡೆ ನಾನು ಎಂದರು.

ಕ್ರಿಕೆಟ್ ಆಟದಲ್ಲಿ ನೀವು ಖಂಡಿತ ನನ್ನನ್ನು ಸೋಲಿಸುವಿರೆಂದು ನಾಬಲ್ಲೆ, ಆದರೆ ನಿಮ್ಮನ್ನು ರಾಜನೀತಿಯಲ್ಲಿ ಸೋಲಿಸುವ ನಂಬಿಕೆ ಮಾತ್ರ ನನಗಿಲ್ಲ ತಮಾಷೆಗಾಗಿ ನುಡಿದರು ನವಾಬ್.

ನವಾಬರೇ... ಈಗಾಗಲೇ ನೀವು ನನ್ನನ್ನು ಬೋಲ್ಡ್ ಮಾಡಿದಿರಲ್ಲ! ಚಿರಪರಿಚಿತ ನಗುವಿನೊಂದಿಗೆ ನುಡಿದರು ಗಾಂಧೀಜಿ.

ಪಟೌಡೀನವಾಬರು ಗಾಂಧೀಜಿಯ ಇನ್ನೊಂದು ಘಟನೆಯನ್ನು ಆಗಾಗಹೇಳುತ್ತಿದ್ದರು ನವಾಬರಾಗ ಇಂಗ್ಲೆಂಡ್ ವತಿಯಿಂದ ಆಸ್ಟ್ರೇಲಿಯಾ ವಿರುದ್ಧ ಒಂದು ಟೆಸ್ಟ್‌ಮ್ಯಾಚ್ ಆಡುತ್ತಿದ್ದರು. ಅವರು ಕಪ್ತಾನ್ ಜರ್ಡಾಯಿನ್ ಅವರನ್ನು ಬೌಂಡ್ರಿಲೈನಿನಲ್ಲಿ ನಿಲ್ಲಿಸಿದ್ದರು. ಇತರ ಆಟಗಾರರಿಂದ ನವಾಬ್ ಬೇರ್ಪಟ್ಟಿರುವುದನ್ನು ಕಂಡು ಪ್ರೇಕ್ಷಕರು ಅವರನ್ನು ಗೇಲಿ ಮಾಡತೊಡಗಿದರು. ಮುಂದೆ ಪಟೌಡಿ ಭಾರತೀಯರೆಂದು ತಿಳಿದಾಗ ಆವರು ಗಾಂಧೀ ಗಾಂಧೀ ಎಂದು ಒದರತೊಡಗಿದರು. ಒಬ್ಬಪ್ರೇಕ್ಷಕ ಒಂದು ತಾಸಿನ ತನಕ ಗಾಂಧೀ ನಿನ್ನ ಮೇಕೆ ಎಲ್ಲಿದೆ. ಎಂದು ಕೂಗುತ್ತಿದ್ದ. ಕಟ್ಟಕಡೆಗೆ ಪಟೌಡೀ ತಡೆಯುಲಾರದೆ ನಿನ್ನ ಬಳಿಯಿಂದ ಬರುತ್ತಿರುವ ದುರ್ನಾತ ಆ ಮೇಕೆ ನಿನ್ನ ಬಳಿಯಲ್ಲೇ ಇದೆಯೆಂದು ಸೂಚಿಸುತ್ತದೆ-ಎಂದರು. ಆ ಬಳಿಕ ಆ ಕೋಲಾಹಲ ಶಾಂತವಾಯಿತು.

ರಣಜೀತಸಿಂಹಜೀ ಹಾಗೂ ದಿಲೀಪಸಿಂಹಜೀಯವರಿಂದಾಗಿ ಕ್ರಿಕೆಟ್‌ಆಟ ಕಚ್ಛ ಹಾಗೂಸೌರಾಷ್ಟ್ರದಲ್ಲಿ ಬಹಳಷ್ಟುಜನಪ್ರಿಯತೆ ಗಳಿಸಿತ್ತು. ಗಾಂಧೀಜಿಯ ಆತ್ಮಕಥೆಯ ಪ್ರಕಾರ, ಅವರ ಶಾಲೆಯ ಮುಖ್ಯೋಪಾಧ್ಯಾಯರಾದ ದೊರಾಬ್ಜಿ ಎದುಲ್ಜೀ ಗಿಮೀಯವರು ಉಚ್ಚತರಗತಿಯ ವಿದ್ಯಾರ್ಥಿಗಳಿಗೆ ಕ್ರಿಕೆಟ್ ಹಾಗೂ ಇತರ ಆಟಗಳನ್ನು ಕಡ್ಡಾಯವಾಗಿರಿಸಿದ್ದರು. ಹೀಗಾಗಿ ಗಾಂಧೀಜಿ ಎಲ್ಲ ಆಟಗಳನ್ನು ಆಡ ಬೇಕಾಯಿತು ಕ್ರಿಕೆಟ್, ಫುಟ್ ಬಾಲ್ ಹಾಗೂ ಇತರ ಆಟಗಳನ್ನು ಕಡ್ಡಾಯಗೊಳಿಸುವ ಮೊದಲು ನನಗೆ ಅವುಗಳಲ್ಲಿ ಅಭಿರುಚಿಇರಲಿಲ್ಲ.—ಎಂದು ಗಾಂಧೀಜಿ ಆತ್ಮಕಥೆಯಲ್ಲಿ ಬರೆದಿದ್ದಾರೆ ಗಾಂಧೀಜಿಯ ಸಹಪಾಠಿ ರತಿಲಾಲ ಘೋಲಾಭಾಯಿಾ ಮೆಹತಾ ರಾಜಕೋಟದ

ಎಲ್ಫ್ರೆಡ್ ಹೈಸ್ಕೂಲಿನಲ್ಲೇ ಕಲಿಯುತ್ತಿದ್ದರು. ಅವರಹೇಳಿಕೆಯಂತೆ ಗಾಂಧೀಜಿ ಕ್ರಿಕೆಟ್ ಪ್ರೇಮಿಯಷ್ಟೇ ಅಲ್ಲ ಸ್ವತಃ ಉತ್ತಮ ಆಟಗಾರರೂ ಎನಿಸಿದ್ದರು. ಜಾಣ ಬ್ಯಾಟ್ಸ್ ಮನ್ ಅಷ್ಟೇಅಲ್ಲ ಕುಶಲಬೌಲರ್ ಕೂಡ ಆಗಿದ್ದರು. ಅವರಿಬ್ಬರೂ ಜತೆ ಜತೆಯಾಗಿ ಆಡುತ್ತಿದ್ದರು ಕ್ರಿಕೆಟ್ ಒಂದನ್ನುಬಿಟ್ಟರೆ ಗಾಂಧೀಜಿಗೆ ಮತ್ತಾವ ಆಟದಲ್ಲೂ ಆಸಕ್ತಿ ಇರಲಿಲ್ಲ. ಮನೆಯಲ್ಲಿ ಕೆಲವೊಮ್ಮೆ ಇಸ್ಪೀಟ್ ಆಡಿದುದುಂಟು. ಕ್ರಿಕೆಟ್ ಆಡುತ್ತ ಆಡುತ್ತ ಗಾಂಧೀಜಿಗೆ ಈ ವಿಷಯದಲ್ಲಿ ಸೂಕ್ಷ್ಮದೃಷ್ಟಿ ಉಂಟಾಯಿತು. ಪರಿಣಾಮ ವಾಗಿ ಅವರು ಕ್ರಿಕೆಟ್ ಪಂದ್ಯಗಳ ಫಲಿತಾಂಶವನ್ನು ಮೊದಲೇ ಅರಿಯುತ್ತಿದ್ದರು. ಕ್ರಿಕೆಟ್‌ದಂತಹ ಅನಿಶ್ಚಿತ ಆಟದಲ್ಲಿ ಈರೀತಿಯ ಭವಿಷ್ಯವಾಗಿ ತಪ್ಪೆನಿಸುವುದು ಸಹಜ ವಾದರೂ ಗಾಂಧೀಜಿಯ ಊಹೆ ಸಹಜವಾಗಿಯೇ ಸರಿಯಾಗುತ್ತಿತ್ತು.

ಒಮ್ಮೆ ಗಾಂಧೀಜಿ ಮೆಹತಾರೊಂದಿಗೆ ರಾಜಕೋಟ್‌ದ ಎರಡು ಆಟವನ್ನು ವೀಕ್ಷಿಸುತ್ತಿದ್ದರು. ಒಬ್ಬ ತುಂಬ ಆತ್ಮವಿಶ್ವಾಸ ಹಾಗೂ ದೃಢತೆಯಿಂದ ಆಡುತ್ತಿದ್ದ, ಆದರೆ ಆತ ಔಟ್ ಆಗಲಿದ್ದಾನೆಂದು ಗಾಂಧೀಜಿಗನ್ನಿಸಿತು. ಮೆಹತಾರಿಗೂ ಅವರು ತಮ್ಮ ವಿಚಾರ ತಿಳಿಸಿದರು. ಮುಂದಿನ ಚೆಂಡಿಗೆ ಆತ ಔಟಾದ.

ಗಾಂಧೀಜಿ ಒಮ್ಮೆ N C C ಟೀಮಿನ ಸದಸ್ಯರೂ ಆಗಿದ್ದರೆಂದು ಕೇಳಿ ನಿಮಗೆ ಅಚ್ಚರಿಯೆನಿಸಬಹುದು. 1933-34ರಲ್ಲಿ ಔಡ್ರ್‍ಯಿನ್‌ರ ನೇತೃತ್ವದಲ್ಲಿ N C C ತಂಡ ಭಾರತದ ಪ್ರವಾಸ ಕೈಗೊಂಡಿತ್ತು. ಆ ವೇಳೆಯಲ್ಲೇ ಹೆಸರಾಂತ ಆಟಗಾರ ವಿಜಯ ಮರ್ಚೆಂಟ್‌ರ ಸೋದರಿ ಆಟೋಗ್ರಾಫ್ ಪಡೆಯಲು ಗಾಂಧೀಜಿಯ ಬಳಿ ಬಂದಿದ್ದರು. ಗಾಂಧೀಜಿ ಅವಳಿಂದ N C Cಯ ಆಟಗಾರರ ಲಿಸ್ಟ್ ಪಡೆದು 16ಆಟ ಗಾರರ ಬಳಿಕ ತಮ್ಮ ಹೆಸರನ್ನು ಅದಕ್ಕೆ ಜೋಡಿಸಿದರು. ಈ ರೀತಿ ಅವರು N CCಯ 17ನೇ ಆಟಗಾರರಾಗಿ ಸ್ವತಃ ಸೇರಿಕೊಂಡರು. ಆ ಸೂಚಿ ಇಂದಿಗೂ ಲಾರ್ಡ್ಸ್‌ನಲ್ಲಿದೆ.

ಯಾರಿಂದಾದರೂ ಅನುಚಿತ ಲಾಭ ಪಡೆಯುವ ಪ್ರವೃತ್ತಿಗೆ ಇಂಗ್ಲೀಷಿನಲ್ಲಿ 'It is not cricket' ಎಂದು ಹೇಳಲಾಗುತ್ತದೆ. ಗಾಂಧೀಜಿ ಜೀವನದುದ್ದಕ್ಕೂ ಈ ಪ್ರವೃತ್ತಿಯನ್ನು ವಿರೋಧಿಸಿದ್ದರು. ಅವರು ಕ್ರಿಕೆಟ್ ಆಟದ ಮೂಲಭಾವವನ್ನು ಹೃದಯಂಗಮ ಗೊಳಿಸಿಕೊಂಡಿದ್ದರೆಂದು ಹೇಳಬಹುದು. ಕ್ರಿಕೆಟ್ ಮೈದಾನದಲ್ಲಿ ಹೆಚ್ಚು ಆಡದೆ ಹೋದರೂ, ಅವರೊಬ್ಬ ಆದರ್ಶಕ್ರಿಕೆಟ್ ಆಟಗಾರರಾಗಿದ್ದರು. ಆಂಗ್ಲ ರೊಡನೆ ಅವರು ದೀರ್ಘಕಾಲ ಅಸಹಕಾರದ ಮ್ಯಾಚ್ ಆಡಿದ್ದರು. ಕ್ರಿಕೆಟ್ ಆಟದ ಸ್ಪಿರಿಟನ್ನು ಅವರು ರಾಜನೀತಿಯಂಥ ವಿಶಾಲ ಕ್ಷೇತ್ರದಲ್ಲೂ ತಂದಿದ್ದರೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಭಾರತೀಯ ರಾಜನೀತಿಯ ಮೈದಾನಿನಲ್ಲಿ ಗಾಂಧೀಜಿಯ ಭವ್ಯ ಇನ್ನಿಂಗ್ಸ್ ಯಾವಾಗಲೂ ನೆನಪಿನಲ್ಲಿರಬಲ್ಲವು. ದೇಶದ ದುರ್ಭಾಗ್ಯದಿಂದ ಅವರೊಂದು ಭಯಂಕರ ಅನ್ಯಾಯದ ಚೆಂಡಿನಿಂದ ಔಟಾದರು. ಆದರೆ ಅವರ ಭವ್ಯ ಆಟ ನಮ್ಮ ಕಣ್ಣೆದುರು ಅಚ್ಚಳಿಯದೆ ಉಳಿಯಬಲ್ಲದು.

# ಗ್ರಾಮಾಂತರ ಬಸವಜಯಂತಿ

—ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣ ಬಂಧು,

13.4.92 ರಂದು ಬೆಂಗಳೂರು ಜಿಲ್ಲೆ ಕೈಕೊಂಡ್ರ ಹಳ್ಳಿಯಲ್ಲಿ ಬಸವಜಯಂತಿಯನ್ನು ಆಚರಿಸಿದ ನಂತರ ಬಸವ ತತ್ವಪ್ರಚಾರದ ಯಾತ್ರಾ ಮಣಿಹ ಮುಂದುವರಿದು ಈ ಕೆಳಗೆನಮೂದಿಸಿರುವ ಪುಣ್ಯ ಗ್ರಾಮಗಳಲ್ಲಿ ಜಯಂತಿಯನ್ನು ಹಮ್ಮಿಕೊಳ್ಳಲಾಗಿತ್ತು. ಪರಮ ಪೂಜ್ಯ ಶ್ರೀ ಶ್ರೀಗಳವರು ಬಸವ ಸಂದೇಶದ ಮೂಲಕ ಜನಜಾಗೃತಿಯನ್ನೇ ಉಂಟುಮಾಡುತ್ತಿದ್ದಾರೆ.

19.4.92 ಬೆಳಕವಾಡಿ, ಮಳವಳ್ಳಿ ತಾ||, ಮಂಡ್ಯ ಜಿಲ್ಲೆ.

21.4.92 ಬೆಟ್ಟದಪಾತೇನಹಳ್ಳಿ, ಹೊಳೆನರಸೀಪುರ ತಾ||, ಹಾಸನ ಜಿಲ್ಲೆ.

23.4.92 ದೊಡ್ಡಗಂಗವಾಡಿ, ರಾಮನಗರ ತಾ||, ಬೆಂಗಳೂರು ಜಿಲ್ಲೆ.

26.4.92 ಸೂಲಿಕೆರೆ, ಬೆಂಗಳೂರು ದಕ್ಷಿಣ ತಾಲ್ಲೂಕು.

1.5.95 ಹುಣಸನಹಳ್ಳಿ, ಕನಕಪುರ ತಾ||, ಬೆಂಗಳೂರು ಜಿಲ್ಲೆ.

4.5.92 ಹೂವಿನಹಳ್ಳಿ, ಹೊಳೆನರಸೀಪುರ ತಾ||, ಹಾಸನ ಜಿಲ್ಲೆ.

9.5.92 ರಂಗೇನಹಳ್ಳಿ, ಮಾಗಡಿ ತಾ||, ಬೆಂಗಳೂರು ಜಿಲ್ಲೆ.

13.5.92 ದೊಡ್ಡಬಳ್ಳಾಪುರ, ಬೆಂಗಳೂರು ಜಿಲ್ಲೆ.